# ಅನ್ವೇಷಣೆ

ಸಂಪಾದಕ : ಆರ್. ಜಿ. ಹಳ್ಳಿ ನಾಗರಾಜ್

ಡಿ. ಎಚ್. ಲಾರೆನ್ಸ್
ಡಾ|| ಪೋಲಂಕಿ ರಾಮಮೂರ್ತಿ
ಡಾ|| ಬಸವರಾಜ ಸಬರದ
ಬಿ. ಟಿ. ಲಲಿತಾನಾಯಕ್
ಕೆ. ಎನ್. ನಾಗರಾಜ್
ವೀಚಿ
ಡಿ. ಹೊಸಳ್ಳಿ ಶಿವು
ನಾವರಸನ್
ಮೋನಿ
ಅರುಂಧತೀಜ
—ಇವರ ಬರಹಗಳು.

ಸಾಹಿತ್ಯ ಪತ್ರಿಕೆ
ಸಂಪುಟ—೧
ಸಂಚಿಕೆ—೨
ಬೆಲೆ: ರೂ. 2
ಡಿಸೆಂಬರ್—೧೯೮೪

ಪ್ರಗತಿಪರ ವಿಚಾರಗಳಿಗೆ

# ಅನ್ವೇಷಣೆ

ಸಾಹಿತ್ಯ ಮಾಸಿಕ

ಸಂಪಾದಕ : **ಆರ್. ಜಿ. ಹಳ್ಳಿ ನಾಗರಾಜ್**

ಸಹ ಸಂಪಾದಕ
**ರಾ. ಮೂರ್ತಿ**

ಗೌರವ ಸಂಪಾದಕ
**ದೊಡ್ಡಹುಲ್ಲೂರು ರುಕ್ಕೋಜಿ**

ಮುಖಪುಟ ಕಲೆ : **ಕೆ. ಎಸ್. ಅಪ್ಪಾಜಯ್ಯ** (ಕಥಾಸಂಕಲನವೊಂದರ ಚಿತ್ರ)

ಪ್ರಿಯರೆ,

'ಅನ್ವೇಷಣೆ' ಉಳಿಯಬೇಕು, ಬೆಳೆಯಬೇಕು. ಇದು ನಮ್ಮ, ನಿಮ್ಮ ಆಶಯ ಕೂಡ. ಈ ದೃಷ್ಟಿಯಿಂದ ನಮಗೆ ಕೆಲವು ಹಿರಿಯ ಲೇಖಕರು ಕೊಟ್ಟ ಸಲಹೆ ಉತ್ತಮವಾದದ್ದು. ಅದನ್ನು ನಾವೂ ಒಪ್ಪಿದ್ದೇವೆ.

ಈ ಪತ್ರಿಕೆ ಉಳಿಯಲೇ ಬೇಕೆಂದಿದ್ದರೆ ಇಷ್ಟು ಮಾಡಿ : ನಮ್ಮ ಪತ್ರಿಕೆಯ ಹೆಸರಿನಲ್ಲಿ ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಇಟ್ಟಿರುವ ಠೇವಣಿ ಹಣಕ್ಕೆ (ಪೋಷಕ ನಿಧಿಗೆ) ನೀವೂ ಸಹಾಯಕರಾಗಿ. ನೀವು ರೂ. 250 ರಿಂದ ರೂ. 300 ಕೊಡಿ. ನಿಮ್ಮ ಹಣ ಬ್ಯಾಂಕ್‌ನಲ್ಲಿ ಠೇವಣಿ ರೂಪದಲ್ಲಿರುತ್ತದೆ. ಬರುವ ಬಡ್ಡಿ ಹಣದಲ್ಲಿ ಪತ್ರಿಕೆ ನಿಮಗೆ ತಲುಪುತ್ತದೆ. 3 ವರ್ಷದ ನಂತರ ನಿಮ್ಮ ಹಣ ಬೇಕೆಂದರೆ ವಾಪಸ್ಸು ಕೊಡುತ್ತೇವೆ. ಈ ನಡುವೆ ಯಾವುದೇ ಕಾರಣದಿಂದಲಾದರೂ ಪತ್ರಿಕೆ ನಿಂತರೂ ನಿಮ್ಮ ಹಣವನ್ನು ಪ್ರಾಮಾಣಿಕವಾಗಿ ಹಿಂತಿರುಗಿಸುತ್ತೇವೆ.

**'ಅನ್ವೇಷಣೆ' ಬದುಕಲು ಈ ಯೋಜನೆ. ಸಹಕರಿಸಿ.**

**ಚಂದಾ ವಿವರ :**

ವಾರ್ಷಿಕ ಚಂದಾ : 20 ರೂಪಾಯಿಗಳು

ಚಂದಾ ಹಣವನ್ನು ಚೆಕ್ ಮೂಲಕ ಕಳುಹಿಸುವವರು 22 ರೂಪಾಯಿ ಕಳುಹಿಸಬೇಕು. ಸಂಪಾದಕರ ವೈಯಕ್ತಿಕ ಹೆಸರಿನಲ್ಲಿ ಚೆಕ್/ಡಿ.ಡಿ. ಕಳುಹಿಸಿ. ಎಂ.ಓ. ಮೂಲಕವೂ ಚಂದಾ ಕಳುಹಿಸಿ.

ವಿಳಾಸ : ಸಂಪಾದಕ, 'ಅನ್ವೇಷಣೆ', 37/2-ಎ, 'ನಿಸರ್ಗ', ನಾಗರಬಾವಿ ರಸ್ತೆ,
ವಿಜಯನಗರ-ಉತ್ತರ, ಬೆಂಗಳೂರು-560079

# ‘ಭೂಪಾಲ’

ಭೂಪಾಲ ಬಹುಪಾಲು ನಿನ್ನ
ಜನಾ ವಿಷಗಾಳಿ ಸೇವಿಸಿ
ಅಸು ನೀಗಿದರಂತಲ್ಲಾ !
ಪಾಲನೆ ಪೋಷಣೆ ಹೊತ್ತ ಜನಾ
ಧನಾ ಕಾಯಲು ಹೋದರೇನು ?
ಬಿಸಿಗಾಳಿ, ತಂಗಾಳಿ ಚುನಾವಣೆಯು
(ಹಿಂದೆ) ಚಂದಿರಗಾಳಿ ತಗುಲಿಸಿಕೊಂಡ
ಜನಾ ಜರ್ಜರಿತರಾದರು;
ಕೊನೆ ಉಸಿರೆಳೆದರು.
ಎಂಥ ಭೀಕರ ಅನಿಲ
ಸುಳಿದಾಡಿ ಕೊಚ್ಚಿ ಹಾಕಿತಲ್ಲ
ರಾಶಿ ಹೆಣಗಳ ಬೀದಿಗೆ ಹಾಸಿತಲ್ಲ
ಭೂಪಾಲ,
ಭೂಮಿ ಅಪಾರ
ನಿನಗಿಲ್ಲ ಯಾರ ದರಕಾರಾ.
ದೂರದಲಿ ಸುದ್ದಿ ಓದಿದ ನಾವು
ಕನಿಕರಿಸಿ ಕಣ್ಣೀರ ಸುರಿಸುವೆವು
ಮತ್ತೇನು ಮಾಡಲು ಸಾಧ್ಯ ?
ವಿಷ ನುಂಗಿದ ನಮ್ಮವರಿಗೆ
ಇಗೋ—ಶ್ರದ್ಧಾಂಜಲಿ! ಶ್ರದ್ಧಾಂಜಲಿ !!

○ ಪ್ರಹ್ಲಾದ ಬೆಟಗೇರಿ

# ಪತ್ರಗಳು... ಪತ್ರಗಳು...
# ನಮ್ಮದೂ ಒಂದಷ್ಟು ಮಾತು

'ಹುಶ್.....!' ಎನ್ನುವಷ್ಟು ಪತ್ರಗಳು. ಬೆನ್ನು ತಟ್ಟುವ ಬೊಗಸೆ ಬೊಗಸೆ ಮಾತುಗಳು. ನಿಮ್ಮದು ಎಂಟೆದೆ-ಒಂಬತ್ತೆದೆ ಎಂಬ ಹೈಕ್ಲಾಸ್ ಹೊಗಳಿಕೆಗಳು. ಪಕ್ಕಾ ಎನ್ನಬಹುದಾದ ಸಲಹೆ-ಹಾರೈಕೆ: ಧನ್ಯವಾದಗಳು. ಕೆಲವರಿಗೆ ಅರೆ! ಎನಿಸಿದರೆ ಹಲವರಿಗೆ ಅಬ್ಬಾ! ಎನಿಸಿ ಮೈ ಪುಲಕ. ಪ್ರಥಮ ಸಂಚಿಕೆಯ ಬಗ್ಗೆ ಬರೆದವರೇ ಬಹಳ. ಚೆಕ್/ಮನಿಯಾರ್ಡರ್ ಮೂಲಕ ಚಂದಾ ಕಳುಹಿಸಿದವರೇ ಕಮ್ಮಿ. ಹೇಗೊ.... ಅಂತೂ ಪತ್ರಿಕೆಯ ಬಗ್ಗೆ ಅಭಿಮಾನವಿಟ್ಟು ಬರೆದ ಎಲ್ಲರಿಗೂ ವಂದನೆಗಳು.

ನಮ್ಮ ನಡುವಿನ ಲೇಖಕ-ಲೇಖಕಿಯರು ಸುಡುವ ಕನಸಿನ ತುಣುಕುಗಳನ್ನು ಚಪ್ಪರಿಸಿ ನಾಲಿಗೆ ಸುಟ್ಟುಕೊಂಡು ಸಧ್ಯ ತೆಪ್ಪಗಾಗಿರುವುದನ್ನು ಕಂಡಾಗ ಯಾವ ಸೃಜನಶೀಲತೆಗೆ ತಾನೆ ಭಯವಾಗುವುದಿಲ್ಲ? ನಾವೂ ಇಂತಹ ಎಷ್ಟೋ ಪ್ರಸಂಗಗಳನ್ನು ಕಂಡವರೇ. ಹೀಗಾಗಿ ನಮಗೂ 'ಅನ್ವೇಷಣೆ'ಯನ್ನು ಉಳಿಸಿಕೊಳ್ಳುವುದರಲ್ಲಿ ವಿಶೇಷ ಕಾಳಜಿ. ನಮ್ಮಲ್ಲಿ ಯೋಜನೆಗಳೇನೋ ಇವೆ. ಆದರೆ ಅದಕ್ಕೆ ಮಿಡಿಯುವ ಮನಸ್ಸುಗಳು ಬೇಕಷ್ಟೆ. ನಿಮ್ಮ ಮನಸ್ಸು ಸಹ ಇಂತಹದೇ ಏಕಾಗಿರಬಾರದು? ಇಂತಹ ಮನಸ್ಸುಗಳನ್ನ ನಾವು ಅನ್ವೇಷಿಸುತ್ತ. ಸೀಮಿತ ಸರ್ಕಲ್ಲಿನಾಚೆಗೂ ಅನ್ವೇಷಣೆಯನ್ನು ಒಯ್ಯುವ ಪ್ರಯತ್ನದ ಜೊತೆಗೆ ನಾವೂ ಹೆಚ್ಚಾಗಿ ಹೊಸ ಮಾತುಗಳನ್ನು ಹುಡುಕುತ್ತಿದ್ದೇವೆ. ಈ ಮಾತುಗಳ ದಾಖಲೆಗೆ ಪತ್ರಿಕೆಯಂತೂ ಬೇಕು ಅಲ್ಲವೆ? ಮೊದಲೇ ನಮ್ಮದು ಸಾಹಿತ್ಯ ಪತ್ರಿಕೆ. ಆದ್ದರಿಂದಲೇ ಏನೊ, ನಮ್ಮ ಪತ್ರಿಕೆಯ ಬದುಕಿನ ಬಗೆಗೇ ಎಲ್ಲರಿಗೂ ಸಂಶಯ! ಏಕೆ ಇವರೆಲ್ಲ ಹೀಗೆ? ಇವರಿಗೆ ನಾವು ಹೇಳುವುದಿಷ್ಟು: ನಮ್ಮ ಪತ್ರಿಕೆ ಬದುಕಲೇ ಬೇಕು ಎಂಬ ತೀರ್ಮಾನ ನಮ್ಮಂತೆ ನಿಮ್ಮದೂ ಆದಲ್ಲಿ ದಯವಿಟ್ಟು ಸಾಹಿತ್ಯ ಪತ್ರಿಕೆಗಳ ಪರವಾಗಿ ನಿಮ್ಮ ಜೇಬುಗಳಿಗೆ ಸ್ವಲ್ಪ ಹಗುರವಾಗಿ ತೊಂದರೆ ಕೊಡಿ. ನಾವಿಲ್ಲಿ ಹಿರಿಯ ಶಾಂತರಸರನ್ನು ಜ್ಞಾಪಿಸಿಕೊಳ್ಳಲೇಬೇಕು. 'ಸಾಹಿತ್ಯ ಪತ್ರಿಕೆಗಳು ಬದುಕಬಲ್ಲವು ಎಂಬುದನ್ನು ನಾವು + ನೀವು ತೋರಿಸಿಕೊಡುವ ಕಾಲ ಈಗ ಬಂದಿದೆ. ಚಂದಾ ಹಣ ರೂ. 22/- ಚೆಕ್ ಮೂಲಕ ಕಳುಹಿಸುತ್ತಿರುವೆ-ಸ್ವೀಕರಿಸಿ'.

ಕೆಲವರು ಈಗಿರುವ ಸಾಹಿತ್ಯ ಪತ್ರಿಕೆಗಳಿಗಿಂತ ಸ್ವಲ್ಪ ಭಿನ್ನವಾದದ್ದನ್ನು ಕೊಡಿ ಎಂದೂ ಬರೆದಿದ್ದಾರೆ. ನಮ್ಮ ನಡುವಿನ ಕೆಲವು ಲೇಖಕರು ಸೋಮಾರಿಗಳಾದ್ದರಿಂದ ಭಿನ್ನವಾದದ್ದನ್ನು ಕೊಡಲು ಕಷ್ಟವಾಗಬಹುದು. ನೀವು ದಯವಿಟ್ಟು ತಿಳಿಸಿ-ನಿಮ್ಮ ದೃಷ್ಟಿಯಲ್ಲಿ 'ಅನ್ವೇಷಣೆ' ಈಗಿರುವ ಸಾಹಿತ್ಯ ಪತ್ರಿಕೆಗಳಿಗಿಂತ ಹೇಗೆ ಭಿನ್ನವಾಗಿರಬೇಕು? ಮುಲಾಜು ಬೇಡ-ಮುಕ್ತ ಬರೆಯಿರಿ. ಇನ್ನು ನಮ್ಮ ಸಂಪಾದಕನ ನೋವಿನಲ್ಲಿ ನೀವೂ ಸಮಭಾಗಿಗಳಾಗುವಿರೆಂದು ನಂಬುತ್ತ ಮಾತನ್ನು ಮುಕ್ತಾಯಿಸಲೆ....?

—ರಾ. ಮೂರ್ತಿ, ಸಹ ಸಂಪಾದಕ

# ಓದಲ ದನಿಗೆ ಮಿಡಿದವರು

ಪ್ರಿಯ ನಾಗರಾಜ್,

೦ 'ಅನ್ವೇಷಣೆ' ಖುಷಿ ಕೊಟ್ಟಿತು. ಸಾಹಿತ್ಯಕ ಪತ್ರಿಕೆಗಳು ಬದುಕಬಲ್ಲವು ಎಂಬು ದನ್ನು ನಾ(ನೀ)ವು ತೋರಿಸಿ ಕೊಡುವ ಕಾಲ ಈಗ ಬಂದಿದೆ. (ಚಂದಾ ಹಣ ರೂ. 22/– ಚೆಕ್ ಮೂಲಕ ಕಳುಹಿಸುತ್ತಿರುವೆ–ಸ್ವೀಕರಿಸಿ).

ರಾಯಚೂರು-584101 ಶಾಂತರಸ

೦ ಸಾಹಿತ್ಯದ ಜೊತೆ ವೈಚಾರಿಕತೆಗೂ ಪ್ರಾಶಸ್ತ್ಯವಿರುವ ಲೇಖನಗಳಿವೆ. ಕವನಗಳೂ ಹೊಸ ಅಲೆಯವಾಗಿದ್ದು ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವಂತಿವೆ.

ಮಾಸ್ತಿಯವರ ಐತಿಹಾಸಿಕ ಕಾದಂಬರಿ ಬಗ್ಗೆ 'ಮನಜ' ಅವರು ವಸ್ತುನಿಷ್ಠವಾಗಿ ಬರೆದಿದ್ದಾರೆ. ಬೇರೆಯವರ ವಿಮರ್ಶೆಯನ್ನು ಸಕಾರಣವಾಗಿ ಖಂಡಿಸಿದ್ದ ವಿಲಿಯಂ ಜಫರ್‌ಸನ್ ಬಿಟ್ಟು ಮುತ್ತಣ್ಣನನ್ನು ಅವಲಂಬಿಸಿದ್ದು; ಚಿಕವೀರನ ಒಂದು ಮುಖವನ್ನಷ್ಟೇ ಕಾದಂಬರಿಕಾರರು ಚಿತ್ರಿಸಿದ್ದಾರೆ ಎಂದು ವ್ಯಾಖ್ಯಾನಿಸು ವುದು ಸರಿ. ಮಾಸ್ತಿಯವರ ಗೌರವಕ್ಕೂ, ಕೃತಿ ವಿಮರ್ಶೆಗೂ ಅಂತರವಿದ್ದೇ ಇದೆ. ಅಭಿಪ್ರಾಯ ಭೇದಕ್ಕೂ ಗೌರವಕ್ಕೂ ವ್ಯತ್ಯಾಸವಿದೆಯಲ್ಲವೆ?

'ವಿಚಾರವಾದಿ ಅಬ್ರಹಾಂ ಕೋವೂರ್' ಬಗ್ಗೆ ಪರಿಚಯಾತ್ಮಕ ಲೇಖನ ಸಹ ಸೊಗ ಸಾಗಿದೆ. ತಮ್ಮ ಸಂಪಾದಕೀಯದಲ್ಲೂ ವಾಸ್ತವವನ್ನೇ ಪತ್ತೆ ಹಿಡಿದಿದ್ದೀರಿ. 'ಸಾಹಿತಿ-ಸಾಹಿತ್ಯ–ಸುದ್ದಿ'ಯಲ್ಲಿ ಅರುಂಧತೀಜ ಅವರು 'ಚಿಕವೀರರಾಜೇಂದ್ರ'ದ ಬೆಲೆ ಬಗ್ಗೆ ಸೊಗಸಾದ ಟೀಕೆ ಮಾಡಿದ್ದಾರೆ. ಆ ಕೃತಿಯನ್ನು ಕೇವಲ ಅಸಲಿಗೆ ಮಾರಾಟ ಮಾಡಿದ್ದರೆ ಹೆಚ್ಚು ಜನ ಓದಲು ಅನುಕೂಲವಾಗುತ್ತಿತ್ತು–ಆಲೋ ಚನೆ ಸಹಜವೇ ಅಲ್ಲವೆ?

ಮದ್ದೂರು–571428 ಅರ್ಜುನಪುರಿ ಅಪ್ಪಾಜಿಗೌಡ

೦ 'ಅನ್ವೇಷಣೆ' ನಿರೀಕ್ಷೆಗೂ ಮೀರಿ ಮಹತ್ವಪೂರ್ಣವಾಗಿ ಬಂದಿದೆ. ಧನ್ಯವಾದಗಳು. ವೈಚಾರಿಕ ಲೇಖನಗಳು, ಕವಿತೆಗಳು ಪ್ರಸ್ತುತ ಸಂದರ್ಭದಲ್ಲಿ ತುರ್ತಾದ ಸ್ಪಂದನ ನೀಡುವಂಥವು. 'ಅನ್ವೇಷಣೆ' ಬೃಹತ್ತಾಗಿ, ಮಹತ್ತಾಗಿ ಬೆಳೆಯಲಿ.

ಗೋಕಾಕ್ (ಬೆಳಗಾಂ ಜಿಲ್ಲೆ) ಶಶಿಕಲಾ ವಸ್ತ್ರದ

೦ 'Love at first sight'ನಂತೆ ಪ್ರಥಮ ಸಂಚಿಕೆಯಲ್ಲೇ ಮನ ಅಪಹರಿಸಿತು. ಕನ್ನಡದ ಹಿರಿಯ ಲೇಖಕರೊಂದಿಗೆ ಸಂದರ್ಶನ ನಡೆಸಿದರೆ, ಅವರ ವಿಚಾರಧಾರೆ ಯನ್ನು ನಮ್ಮಂಥ ಕಿರಿಯ ಬರಹಗಾರರು ಓದಲು, ಅರಿಯಲು ಅವಕಾಶವಾಗು ತ್ತದೆ. ಹಾಗೇಕೆ ಮಾಡಬಾರದೆಂದು 'ಅನ್ವೇಷಣೆ'ಗೊಂದು ಪ್ರಶ್ನೆ.

ಶಿವಮೊಗ್ಗ ಎಸ್. ಎಸ್. ಇಂದುವದನೆ

ಸದ್ಯದಲ್ಲೇ ಕೆಲವು ಲೇಖಕರೊಂದಿಗಿನ ಸಂದರ್ಶನ ಮತ್ತು 'ಖಾಸಗಿ ಮಾತು' ಗಳನ್ನು ಪ್ರಕಟಿಸಲಿದ್ದೇವೆ.

—ಸಂಪಾದಕ

೦ ಬದುಕಿನ ವಾಸ್ತವಿಕ ಮೌಲ್ಯಗಳೊಡನೆ ಸಾಹಿತ್ಯದ ಸ್ಪಂದನ ಹೇಗೆ ಸಮ್ಮಿಳಿತಗೊಳ್ಳಬಲ್ಲದು ಎಂಬುದಕ್ಕೆ 'ಅನ್ವೇಷಣೆ' ಕೈಗನ್ನಡಿಯಂತಿದೆ. ಕೆಲವೇ ಸಾಹಿತ್ಯಾಭ್ಯಾಸಿಗಳಿಗಾದರೂ ಬೇಕಾಗಿರುವ ಇಂತಹ ಪತ್ರಿಕೆ ಇಂದು ನಮ್ಮ ಮಧ್ಯೆ ಅಸ್ತಿತ್ವ ಪಡೆದಿರುವುದು ಹೆಮ್ಮೆಯ ವಿಷಯ. ನಾವೆಲ್ಲರೂ ಎಲ್ಲಾ ರೀತಿಯಿಂದ ನಿಮ್ಮ ಕೈ ಬಲಪಡಿಸುವುದರ ಮೂಲಕ ಪತ್ರಿಕೆಯನ್ನು ಸ್ವಾಗತಿಸುತ್ತೇವೆ.

ಆಲೂರು (ಹಾಸನ ಜಿಲ್ಲೆ) ಚಂದ್ರಶೇಖರ ಧೂಲೇಕರ್

೦ ನಿಮ್ಮ ವೈಚಾರಿಕ ಪತ್ರಿಕೆ ಹಾಗೂ ಮುಕ್ತ ಚಿಂತನೆಯ ಬರಹಗಳ ಪ್ರಯೋಗಕ್ಕೆ ದಯವಿಟ್ಟು ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸ್ವೀಕರಿಸಿರಿ. ಜಾಣಗೆರೆ ವೆಂಕಟರಾಮಯ್ಯನವರ ಕತೆ (ಪಿಂಡ), ಕೆ. ವಿಜಯಲಕ್ಷ್ಮಿ, ಎಚ್. ಎಸ್. ಶಿವಪ್ರಕಾಶ್‌ರ ಕವಿತೆಗಳು, 'ಮನಜ' ಅವರ ವಿಮರ್ಶೆ ಈ ಸಂಚಿಕೆಗೆ ವಿಶೇಷ ಬೆಡಗನ್ನು ತಂದಿವೆ. ಒಟ್ಟಿನಲ್ಲಿ ಕನ್ನಡ ಲೇಖಕರ ಬಳಗದಲ್ಲಿ ಹೊಸ ಧ್ವನಿಗಳನ್ನು ಹೊರಡಿಸಿವೆ.

ಬೆಂಗಳೂರು ಸು. ರಂ. ಎಕ್ಕುಂಡಿ

೦ ಸೊಗಸಾದ ಮುಖ ವಿನ್ಯಾಸ ಹೊಂದಿ, ಗಟ್ಟಿಯಾದ ಸಾಹಿತ್ಯಕ ಪತ್ರಿಕೆಯಾಗಿ ಕೈ ಸೇರಿತು. ನಿಮ್ಮ ಈ ಹೋರಾಟಕ್ಕೆ ಕೃತಜ್ಞತೆಗಳು. ದಯವಿಟ್ಟು ಕಲಾಕಾರ ಚಿ. ಸು ಕೃಷ್ಣಶೆಟ್ಟಿ ಅವರಿಗೆ ನನ್ನ ನೆನಕೆ ತಿಳಿಸಿರಿ. ಯಾಕೋ ನೋಡಿದಂತೆ ಚಿತ್ರ ನನ್ನ ಭಾಸಿಗೊಳಿಸಿತು.

ರಾಮದುರ್ಗ (ಬೆಳಗಾಂ ಜಿಲ್ಲೆ) ಶಂಕರ ಕಟಗಿ

೦ ಒಂದು ಸಾಹಿತ್ಯ ಪತ್ರಿಕೆ ಹೊರತರಲು ಎಂಟೆದೆ ಬೇಕು. ಅದು ನನಗಿದೆಯೆಂದು ಸಾಬೀತು ಮಾಡಿರುವಿರಿ. ಕೊಂಕು ಮಾತಿಗೆ ಸುಂಕ ತೆರಲು ಸಾಧ್ಯವೆ? ಅಂತಹ ಮಾತುಗಳಿಗೆ ಕಿವಿಗೊಡದೆ ಮುಂದುವರೆಯಿರಿ. ಯಶ ನಿಮ್ಮದಾಗಲಿ.

ಗೌನಿಪಲ್ಲಿ–563 135 ಸ. ರಘುನಾಥ

೦ ನಿಮ್ಮ 'ಅನ್ವೇಷಣೆ' ಪತ್ರಿಕೆ ಓದಿದೆ. ಹೆಸರಿಗೆ ಅನ್ವರ್ಥವಾಗುವಂತೆ ಸಾಹಿತ್ಯದ ಹೊಸ ಹೊಸ ಆಯಾಮಗಳ, ಸತ್ವಯುತ ಬರಹಗಾರರ ಲೇಖನಗಳಿವೆ. ಸಾಹಿತ್ಯದ ಜೊತೆಗೆ ಕಲೆಗೂ ಪ್ರೋತ್ಸಾಹ ನೀಡುವುದು ಅವಶ್ಯಕ. ಒಳ್ಳೆಯ ಲೇಖಕರಿಂದ ಎಲ್ಲಾ ಪ್ರಕಾರಗಳ ಕಲೆಗಳ ಬಗ್ಗೆ ಆಗಾಗ್ಗೆ ಬರೆಯಿಸಿ ಪ್ರಕಟಿಸಿ. ಮುಂದಿನ ಸಂಚಿಕೆಗಳು ವೈಚಾರಿಕತೆ ಮತ್ತು ವೈವಿಧ್ಯದಿಂದ ಕೂಡಿರಲಿ.

ಅಣಜಿ (ದಾವಣಗೆರೆ ತಾ॥) 577 512 ಎ. ರುದ್ರಪ್ಪ

(43ನೇ ಪುಟ ನೋಡಿ)

# ಕಾಮ, ರೂಪ, ಸೌಂದರ್ಯ

ಮೂಲ : ಡಿ. ಎಚ್. ಲಾರೆನ್ಸ್

ಅನುವಾದ : ಕೆ. ಪಿ. ಪೂರ್ಣಚಂದ್ರ ತೇಜಸ್ವಿ

ಲಾರೆನ್ಸ್ ಈ ಶತಮಾನದ ಶ್ರೇಷ್ಠ ದಾರ್ಶನಿಕರಲ್ಲೊಬ್ಬ. ಆತನ 'ಲೇಡಿ ಚಾಟರ್ಲಿ' ಕಾದಂಬರಿಯನ್ನು ಸರಕಾರ ಮುಟ್ಟುಗೋಲು ಹಾಕಿದಾಗ ಈ ಅತಿ ಶ್ರೇಷ್ಠ ಚಿಂತಕನಿಗೆ ದೊರೆತುದು ಕುಖ್ಯಾತಿ. ಈ ಯಾಂತ್ರಿಕ ಜಗತ್ತಿನಲ್ಲಿ ಜೀವವನ್ನು ಜೀವವನ್ನಾಗೇ ಉಳಿಸಲು ಸೌಂದರ್ಯದ, ಸೃಷ್ಟಿಶಕ್ತಿಯಾದ ಕಾಮದ ಸ್ಥಾನ, ಮಹತ್ವಗಳನ್ನು ತಿಳಿಸಲು ಹೆಣಗಿದ ಮಹಾನ್ ವ್ಯಕ್ತಿ ಲಾರೆನ್ಸ್. ಆತನ ಜೀವನದ ಬಗೆಯ ಆಸ್ಥೆ; ಕಾಮದ ಬಗ್ಗೆಯ ಆಸ್ಥೆ ಹಾಗೂ ಭಗವಂತನ ಬಗ್ಗೆಯ ಆಸ್ಥೆ–ಈ ಮೂರೂ ಒಂದೇ ಮೂಲದಿಂದ ಉದ್ಭವವಾದಂಥವು. ಆದ್ದರಿಂದ ಈತನ ಕಾಮದ ಬಗ್ಗೆಯ ಆಸ್ಥೆಯನ್ನು ನಾವು ಇಂದ್ರಿಯ ಸುಖಲೋಲುಪತೆ ಎಂದೋ, ಕಾಮುಕತನವೆನ್ನು ಎಂದೋ ಅರ್ಥ ಮಾಡಿಕೊಂಡರೆ ಆತನಿಗೆ ಅಪಚಾರ ಮಾಡಿದಂತೆ ಹಾಗೂ ಆ ಮೂಲಕ ನಮ್ಮ ಆತ್ಮಕ್ಕೆ ಅಪಚಾರ ಮಾಡಿಕೊಂಡಂತೆ. —ಸಂ.

ಕಾಮ ಎನ್ನುವುದು ಒಂದು ಅಶ್ಲೀಲ ಶಬ್ದವಾಗಿರುವುದು ಅತ್ಯಂತ ಖೇದಕರವಾದ ಸಂಗತಿ. ಈ ಚಿಕ್ಕ ಅಶ್ಲೀಲ ಶಬ್ದ ನಿಜವಾಗಿ ಮಹಾ ವ್ಯಾಪಕವಾದುದು. ಕಾಮ ಎಂದರೇನು? ಅಷ್ಟಕ್ಕೂ! ಎಷ್ಟೆಷ್ಟು ಯೋಚಿಸುವಿರೋ ಅಷ್ಟಷ್ಟು ನಾವು ಇದರ ಬಗ್ಗೆ ಅರಿತಿರುವುದು ಕಡಿಮೆ ಎನ್ನಿಸುತ್ತದೆ.

ವಿಜ್ಞಾನವು ಅದೊಂದು ಪ್ರವೃತ್ತಿ ಎಂದು ಹೇಳುತ್ತದೆ. ಪ್ರವೃತ್ತಿ ಎಂದರೆ ಅದೊಂದು ಪರಂಪರಾಗತವಾದ ದತ್ತವಾದ ಪ್ರಾಚೀನ ಅಭ್ಯಾಸ. ಆದರೆ ಎಷ್ಟು ಹಳತಾದುದು ಈ ಅಭ್ಯಾಸ. ನ್ಯಾಯವಾಗಿ ಕಾಮವೆನ್ನುವ ಅಭ್ಯಾಸಕ್ಕೆ ಆದಿ ಎನ್ನುವುದೇ ಇಲ್ಲ. ಜೀವ ಎಲ್ಲಿದೆಯೋ ಅಲ್ಲಿ ಕಾಮ ಇದೆ. ಆದುದರಿಂದಲೇ ಕಾಮ ರೂಪಿಸಿಕೊಂಡ ಅಭ್ಯಾಸ ಅಲ್ಲವೇ ಅಲ್ಲ.

ಪುನಃ ಕಾಮವನ್ನು ಒಂದು ಬಗೆಯ ಹಸಿವೆ, ಒಂದು ಬಗೆಯ ದಾಹ ಎಂದು ಮಾತನಾಡುತ್ತಾರೆ. ಆದರೆ ಯಾವ ದಾಹ? ಯಾವ ಹಸಿವು? ಜೀವೋತ್ಪಾದನೆಯ ದಾಹವೆ? ಇದು ಹಾಸ್ಯಾಸ್ಪದ. ಇವರು ನವಿಲು ತನ್ನ ಸಹಸ್ರಾಕ್ಷಿಯ ಪುಕ್ಕವನ್ನು ಹೆಣ್ಣು ನವಿಲನ್ನಾಕರ್ಷಿಸಿ ತನ್ನ ಜೀವೋತ್ಪಾದನೆಯ ದಾಹವನ್ನು ತೀರಿಸಿಕೊಳ್ಳಲು

ಕೆದರಿಕೊಂಡು ಕುಣಿಯುತ್ತದೆನ್ನುತ್ತಾರೆ. ಹಾಗಾದರೆ ಹೆಣ್ಣು ನವಿಲೂ ಏಕೆ ಪುಕ್ಕ ಕೆದರಿ ತನ್ನ ದಾಹ ತೃಪ್ತಿಗೆ ಆಕರ್ಷಿಸಲು ಕುಣಿಯುವುದಿಲ್ಲ ?

ನಾನರಿತಂತೆ ಹೆಣ್ಣುನವಿಲು ಗಂಡು ನವಿಲಿನ ಮಯೂರ ನೃತ್ಯವನ್ನು ಕಿಂಚಿತ್ತೂ ಗಮನಿಸಿಯೂ ಇಲ್ಲ. ಅದರ ಬಣ್ಣದ ಬೆಡಗನ್ನೇ ಆಗಲಿ ನೂರು ಕಣ್ಣಿನ ಕಸೂತಿ ಯನ್ನೇ ಆಗಲಿ ಅಥವಾ ಬಣ್ಣ ಬಣ್ಣಕ್ಕಿರುವ ವ್ಯತ್ಯಾಸವನ್ನೇ ಆಗಲಿ ಅದು ಗುರು ತಿಸೀತೇ ಎನ್ನುವುದೇ ನನಗೆ ಸಂಶಯ.

ನಾನಿದುವರೆಗೆ ಹೆಣ್ಣು ನವಿಲು ಗಂಡಿನ ಬಣ್ಣದ ಗರಿಗಳ ಬೀಸಣಿಗೆಯ ಲಾಸ್ಯಕ್ಕೆ ಪ್ರೇಕ್ಷಕಳಾಗಿ ನೋಡುತ್ತ ಕುಳಿತಿರುವುದನ್ನು ಕಂಡೂ ಇಲ್ಲ. ಹಾಂ ಪ್ರೊಮ್ಮೆ ಗಂಡು ಬಿರುಗಾಳಿಗೆ ಝೇಂಕರಿಸುವ ಮರದಂತೆ ಗರಿಗಳನ್ನು ರೊಳಪಿಸಿದಾಗ ಮಾತ್ರ ಗಂಡಿನ ಕೇವಲ ಇರುವಿಕೆಯನ್ನು ಮಾತ್ರ ಗಮನಿಸಿತ್ತು. ಹೆಣ್ಣು ನವಿಲು.

ಕಾಮದ ಬಗ್ಗೆ ಹೇಳುವ ಸಿದ್ಧಾಂತಗಳೆಲ್ಲ ಅಚ್ಚರಿ ತರಿಸುವ ವಿಕಾರಗಳು. ನವಿಲು ತನ್ನ ಅನಂತವರ್ಣದ ಲಕ್ಷ ಅಕ್ಷಿಯ ಪುಕ್ಕವನ್ನು ಕೆದರಿಕೊಂಡು ತನ್ನತ್ತ ಒಮ್ಮೆಯೂ ನೋಡದ ಹೆಣ್ಣ ನವಿಲಿಗಾಗಿ ನೃತ್ಯಮಾಡುತ್ತದೆ ಎನ್ನುವಂಥದು.

ಮತ್ತು ಒಂದು ಕೋಗಿಲೆ ಹೆಣ್ಣಿಗಾಗಿ ಹಾಡುತ್ತದೆ ಎನ್ನುತ್ತಾರೆ. ಕೋಗಿಲೆ ಕೂಗಿನಿಂದ ಆಕರ್ಷಿತವಾಗಿ ಮಿಳನಗೊಂಡ ನಂತರ ಕೋಗಿಲೆಯ ಹಾಡನ್ನು ಹೆಣ್ಣು ನಿರ್ಲಕ್ಷಿಸುತ್ತದಲ್ಲಾ. ಅನಂತರ ಕೋಗಿಲೆಯ ಹಾಡು ಹೆಣ್ಣನ್ನು ಆಕರ್ಷಿಸುವುದಕ್ಕಲ್ಲ ದಿದ್ದರೆ ಓಡಿಸುವುದಕ್ಕೇನು ?

ಎಷ್ಟೊಂದು ಸರಳ ! ಎಷ್ಟೊಂದು ಸುಸಂಬದ್ಧ ಈ ಸಿದ್ಧಾಂತಗಳೆಲ್ಲ ! ಆದರೆ ಇದರೊಳಗೆ ಅಂತರ್ಗಾಮಿಯಾದ ದುರಾಲೋಚನೆಯ ಉದ್ದೇಶ ಒಂದಿದೆ. ಈ ಕಾಮ ವಿಶ್ಲೇಷಣೆಯ ಸಿದ್ಧಾಂತಗಳಡಿಯಲ್ಲಿ ಒಂದು ದ್ವೇಷದ ದೃಷ್ಟಿ ಇದೆ. ಅದೇನೆಂ ದರೆ ಸೌಂದರ್ಯದ ರೂಪದ ಅಂತರಂಗದಲ್ಲಿರುವ ಪವಿತ್ರ ಗೂಢತೆಯನ್ನು ತಿರಸ್ಕರಿ ಸುವ, ನಿರ್ನಾಮ ಮಾಡುವ ದೌಷ್ಟ್ಯ.

ಏಕೆಂದರೆ ಸೌಂದರ್ಯ ಒಂದು ಅಗಮ್ಯ ರಹಸ್ಯ. ನೀವು ಅದನ್ನು ತಿನ್ನಲಾಗು ವುದಿಲ್ಲ. ಅಥವಾ ನೆಯ್ದು ಕಂಬಳಿ ಮಾಡಲಾಗದು. ಆದಕ್ಕೆ ವಿಜ್ಞಾನ, ಸರಿ ಹಾಗಾ ದರೆ ಇದು ಹೆಣ್ಣನ್ನು ಆಕರ್ಷಿಸಿ ಆಕೆಯನ್ನು ಜೀವೋತ್ಪತ್ತಿಗೆ ಪ್ರೇರಿಸಲು ಏರ್ಪಡಿ ಸಿದ ವಿಧಾನ ಎನ್ನುತ್ತದೆ. ಹೆಣ್ಣನ್ನು ಗಂಡು ಪುಸಲಾಯಿಸಬೇಕು ಎನ್ನುವಂತೆ ! ಆದರೆ ಹೆಣ್ಣು ಕತ್ತಲಲ್ಲಿ ಸೃಷ್ಟಿ ನಿರ್ಮಾಣ ಮಾಡುತ್ತಾಳೆ. ಸೌಂದರ್ಯ ಆಗ ಯಾವ ಸ್ಥಾನ?

ವಿಜ್ಞಾನಕ್ಕೆ ಸೌಂದರ್ಯದ ಬಗ್ಗೆ ರಹಸ್ಯ ದ್ವೇಷ ಇದೆ. ಏಕೆಂದರೆ ವಿಜ್ಞಾನದ ಕಾರ್ಯ ಕಾರಣಬದ್ಧ ತರ್ಕದೊಳಗೆ ಅದು ಹೊಂದುವುದಿಲ್ಲವೆಂದು. ಸಮಾಜಕ್ಕೆ ಕಾಮದ ಮೇಲೊಂದು ರಹಸ್ಯ ದ್ವೇಷವಿದೆ. ಏಕೆಂದರೆ ಲಾಭೋತ್ಪತ್ತಿಯ ವಣಿಜ ಪ್ರಪಂಚದಲ್ಲಿ ಅದು ಆಗಾಗ್ಗೆ ಕಲ್ಲೋಲಗಳನ್ನುಂಟುಮಾಡುತ್ತಿರುತ್ತದೆ ಎಂದು ಈ ಎರಡು ದ್ವೇಷಗಳೂ ಕಲೆತು ಕಾಮವನ್ನು ಮತ್ತು ಸೌಂದರ್ಯವನ್ನು, ಜೀವ

ವಿಸ್ಮರಣೆಯು ದಾಹವೆಂದು ವ್ಯಾಖ್ಯಾನಿಸಿದೆ.

ಕಾಮ ಹಾಗೂ ರೂಪ ಇವೆರಡೂ ಬೆಂಕಿಯೂ ಅದರ ಜ್ವಾಲೆಯೂ ಇರುವಂತೆ ಒಂದೇ ಅವಿಭಾಜ್ಯ ವಸ್ತುಗಳು. ನೀವು ಬದುಕುತ್ತಿರುವ ಜೀವಂತ ರೂಪವನ್ನು ಸೌಂದರ್ಯವನ್ನು ಪ್ರೀತಿಸಿದ್ದೆ ಆದರೆ ನಿಮ್ಮಲ್ಲಿ ಅನಿವಾರ್ಯವಾಗಿ ಕಾಮದ ಬಗ್ಗೆ ಗೌರವ ಪೂಜ್ಯತೆಗಳು ಸಂಭವಿಸಬೇಕಾಗುತ್ತದೆ. ನೀವು ಸೌಂದರ್ಯವನ್ನು ದ್ವೇಷಿಸಿದರೆ ಕಾಮವನ್ನೂ ದ್ವೇಷಿಸಬೇಕಾಗುತ್ತದೆ.

ಕಾಮ ಮತ್ತು ಸೌಂದರ್ಯಗಳು ಜೀವನ ಮತ್ತು ಪ್ರಜೆಗಳಂತೆ ಅವಿಭಾಜ್ಯ ಸಂಬಂಧವು. ಕಾಮ ಹಾಗೂ ಸೌಂದರ್ಯ ಮೂಲವಾದ ಹಾಗೂ ಸಂಬಂಧಿಸಿದ ಬೌದ್ಧಿಕತೆಯನ್ನು ನಾವು ಅಂತಃಸ್ಫೂರ್ತಿ ಎಂದು ಕರೆಯಬಹುದು. ನಮ್ಮ ನಾಗರೀಕತೆಯ ಒಂದು ಮಹಾ ದೌರ್ಭಾಗ್ಯ ಎಂದರೆ ಕಾಮದ ಬಗ್ಗೆ ಒಂದು ಅಂಧ ತಿರಸ್ಕಾರ. ಉದಾಹರಣೆಗೆ ಪ್ರಾಯ್ಡ್‌ನ ಕಾಮದ ಬಗ್ಗೆಯ ಮಾನಸಿಕ ವಿಶ್ಲೇಷಣೆ (Psycho-Analysis) ಕಾಮದ ಬಗ್ಗೆ ನಮ್ಮ ಹೀನ ದೃಷ್ಟಿಕೋನವನ್ನು ಅಗೌರವವನ್ನು ತೋರಿಸುತ್ತದೆ. ಅದರೊಡನೆಯೇ, ಸೌಂದರ್ಯದ ಬಗ್ಗೆಯ ಒಂದು ಅಂಧ ತಿರಸ್ಕಾರ ಭಯ ನಮಗಿದೆ ಎನ್ನುವ ಅರಿವು ಆಗುತ್ತದೆ. ಹೇಗೆಂದರೆ ನಮ್ಮ ಅಂತಃಸ್ಫೂರ್ತಿ, ಚೈತನ್ಯದ ಬಗ್ಗೆಯೇ ನಮಗೆ ಭಯ ತಿರಸ್ಕಾರಗಳು ಇವೆ ಎಂದಾಯ್ತು.

ಈ ನವೀನ ಪ್ರಪಂಚದ ಆತ್ಮಗತವಾದ ರೋಗ ಒಂದೆಂದರೆ ಅಂತಃಸ್ಫೂರ್ತಿ ಮೂಲವಾದ ಪ್ರವೃತ್ತಿಗಳ ಬಗ್ಗೆ ಅಜ್ಞಾನ ನಾವು ಕೇವಲ ಅಂತಃಸ್ಫೂರ್ತಿಯಿಂದಲೇ ಆನಂದಿಸಿ ಅನುಭವಿಸಬಹುದಾದ ಒಂದು ಪ್ರಪಂಚವೇ ಇದೆ. ಇದರಿಂದ ನಾವು ಚ್ಯುತರಾಗಿದ್ದೇವೆ. ಏಕೆಂದರೆ ನಾವು ಕಾಮ ಹಾಗೂ ಸೌಂದರ್ಯಗಳನ್ನು ತಿರಸ್ಕರಿಸಿರುವುದರಿಂದ.

ಕಾಮವೇ ಅಂತಃಪ್ರತಿಭೆಯನ್ನು ವೃಕ್ಷವನ್ನಾಗಿಯೂ ಸೌಂದರ್ಯ ಅಥವಾ ರೂಪವನ್ನು ಹೂವನ್ನಾಗಿಯೂ ಪಡೆದಿರುವ ವೃಕ್ಷದ ಬೇರು. ಏಕೆ ಓರ್ವ ಕನ್ನಿಕೆ ತನ್ನ ಇಪ್ಪತ್ತರ ಹರೆಯದಲ್ಲಿ ಇತರ ಕಾಲಗಳಿಗಿಂತ ಆಕರ್ಷಕವಾಗಿ ಕಾಣುತ್ತಾಳೆ? ಏಕೆಂದರೆ ಕಾಮ ಅವಳಲ್ಲಿ ನವುರಾಗಿ ಸೂಕ್ಷ್ಮವಾಗಿ ಬಹಿರಂಗಗೊಳ್ಳತೊಡಗುತ್ತದೆ. ಗುಲಾಬಿ ಗಿಡದಲ್ಲಿ ಹೊಮ್ಮುವ ಗುಲಾಬಿ ಹೂವಿನಂತೆ.

ಈ ಸೌಂದರ್ಯದ ಬಗ್ಗೆ ನಾವೆಂಥ ಅಜ್ಞರೆಂದರೆ ಅದರ ಬಗ್ಗೆ ಮಾತನಾಡಲು, ಚರ್ಚಿಸಲು ದುರ್ಬಲರು. ರೂಪ ಅಥವಾ ಸೌಂದರ್ಯ ಎಂದರೆ ಒಂದು ಅತಿ ನಿರ್ದಿಷ್ಟವಾದುದೆಂದು ಆಲೋಚಿಸುವೆವು. ನೀಳ ಮೂಗು, ಅಗಲವಾದ ಕಣ್ಣು, ಬಾಗಿದ ಹುಬ್ಬು ಇತ್ಯಾದಿ. ಒಬ್ಬಳು ಸೌಂದರ್ಯವತಿಯು ಲಿಲಿಯನ್ ಗಿಷ್ ಹಾಗೂ ಯುವಕನು ವ್ಯಾಲೆಂಟಿನೋ ಹಾಗೂ ಇರಬೇಕೆಂದು ಪರಿಭಾವಿಸುವೆವು.

ಇತ್ತ ದೈನಂದಿನ ಜೀವನದಲ್ಲಿನ ಚರ್ಚೆಯೇ ಬೇರೆಯಾಗಿರುತ್ತದೆ. ಅವಳು ಸುಂದರಿ, ಆದರೆ ನಾನು ಅವಳನ್ನು ಲಕ್ಷಿಸುವುದಿಲ್ಲ ಎಂದೆಲ್ಲ ಅನ್ನುವೆವು. ಇಲ್ಲಿ

ಸೌಂದರ್ಯವನ್ನು ನಾವು ಸರಿಯಾದ ಅರ್ಥದಲ್ಲಿ ಭಾವಿಸಿಲ್ಲವೆನ್ನುವುದು ಸ್ಪಷ್ಟ. ನಾವೇ ನೆನ್ನಬೇಕೆಂದರೆ. "ಇವಳಲ್ಲಿ ನಿಷ್ಕೃಷ್ಟ ಅಂದದ ಲಕ್ಷಣಗಳಿದ್ದರೂ ಈಕೆ ನನ್ನ ಪಾಲಿಗೆ ಸುಂದರಿಯಲ್ಲ" ಎನ್ನಬೇಕು.

ಸೌಂದರ್ಯ ಅಥವಾ ರೂಪ ಎಂದರೆ ಒಂದು ಅನುಭವ ಅಥವಾ ಅನುಭೂತಿ. ಅದೊಂದು ನಿರ್ದಿಷ್ಟ ರೀತಿಯ ಗುಣ ಭಂಗಿಗಳ ಜೋಡಣೆ ಮಾತ್ರವಲ್ಲ; ಅದೊಂದು ಬಗೆಯ ಸಂವೇದನೆ ಆದರೆ ನಾವು ನಮ್ಮ ಸೌಂದರ್ಯಪ್ರಜ್ಞೆಯನ್ನು ಎಷ್ಟೊಂದು ಮೊಂಡ ಮಾಡಿರುವೆವೆಂದರೆ ನಿಜವಾದ ಸೌಂದರ್ಯದಿಂದ ಸದಾ ಚ್ಯುತರಾಗುತ್ತೇವೆ.

ಕೇವಲ ಸಿನಿಮಾ ಪ್ರಪಂಚದಲ್ಲೇ ವಿಮರ್ಶಿಸುವುದಾದರೆ ಚಾರ್ಲಿ ಚಾಪ್ಲಿನನ ವಿಚಿತ್ರ ಮುಖಭಂಗಿಯಲ್ಲಿ ರುಢಾಲ್ಫ ವಾಲೆಂಟೀನೋನಿಗಿಂತ ಎಷ್ಟೋ ಪಟ್ಟು ಮಿಗಿಲಾದ ಸೌಂದರ್ಯವಿದೆ. ಚಾಪ್ಲಿನನ ನಿರಪರಾಧಿಯ ವಿಚಿತ್ರ ಮುಗ್ಧ ಕಣ್ಣುಗಳಲ್ಲಿ ಹುಬ್ಬುಗಳಲ್ಲಿ ಏನೋಒಂದು ಅತೀವ ಸ್ವಚ್ಛತೆ ಮಿನುಗುತ್ತದೆ.

ಆದರೆ ನಮ್ಮ ಸೌಂದರ್ಯ ದೃಷ್ಟಿ ಎಷ್ಟೊಂದು ರೋಗಗ್ರಸ್ತ, ಸಂಕುಚಿತ ಆಗಿದೆ ಎಂದರೆ ಇವನ್ನು ನೋಡಿದಾಗಲೂ ಗಮನಿಸುವುದೇ ಇಲ್ಲ. ನಾವು ಅತಿ ಸ್ಪಷ್ಟವಾದ ರುಢಾಲ್ಫ ವಾಲೆಂಟಿನೋನಂತಹ ಆಕಾರವನ್ನು ಮಾತ್ರ ಪ್ರಶಂಶಿಸುತ್ತೇವೆ. ಏಕೆಂದರೆ ಅದು ನಮ್ಮಲ್ಲಿ ಮೊದಲೇ ನಿರ್ಮಾಣಗೊಂಡಿರುವ, ಸೌಂದರ್ಯದ ಬಗ್ಗೆಯ ಪೂರ್ವಗ್ರಹ ಅಭಿಪ್ರಾಯವನ್ನು ತೃಪ್ತಿಪಡಿಸುವುದರಿಂದ. ಆದರೆ ಒಬ್ಬ ಅತಿ ಸರ್ವೇ ಸಾಧಾರಣ ವ್ಯಕ್ತಿ ಸಹ ಸುಂದರನಾಗಬಹುದು; ಸುಂದರನಾಗಿರಬಹುದು. ಆತನಲ್ಲಿನ ರಕ್ತ, ಕಾಮ ಜಾಜ್ವಲ್ಯಮಾನವಾಗಿದ್ದರೆ. ಈ ಸೌಂದರ್ಯಾನುಭವನ್ನೇ ಅನುರಕ್ತಿ ಎಂದು ಕರೆಯುವುದು. (ಅನುರಕ್ತಿ ಎನ್ನುವ ಪದವನ್ನು ಇಲ್ಲಿ ಲಾರೆನ್ಸ್‌ನ Sex Appeal ಎನ್ನುವ ಪದಕ್ಕೆ ಸಂವಾದಿಯಾಗಿ ಉಪಯೋಗಿಸಿರುವೆನು. ಏಕೆಂದರೆ ಆ ಪದವನ್ನು ಲಾರೆನ್ಸ್ ಕೇವಲ ಲೈಂಗಿಕಾಕರ್ಷಣೆ ಅಥವಾ ಕಾಮ ಸಂವೇದನೆ ಎನ್ನುವ ಲಘುವಾದ ಅರ್ಥದಲ್ಲಿ ಉಪಯೋಗಿಸಿಲ್ಲ. ಕಾಮ ಎನ್ನುವ ಪದವನ್ನೇ ಲಾರೆನ್ಸ್ ಈ ಲೇಖನದಲ್ಲಿ ಎಷ್ಟು ಗಾಢವೂ ಗಂಭೀರವೂ ಆದ ಅರ್ಥದಲ್ಲಿ ಉಪಯೋಗಿಸಿರುವನೆಂಬುದನ್ನು ಗಮನಿಸಿದರೆ ಅನುರಕ್ತಿ ಎನ್ನುವ ಪದದ ವಿಶಾಲಾರ್ಥ ಸ್ಪಷ್ಟವಾದೀತು)

ಇದೇ ರೀತಿಯಲ್ಲಿ ಕೇವಲ ಲಕ್ಷಣವಾದ ಸ್ತ್ರೀಗಿಂತ ಕುರೂಪ ಇನ್ನೊಂದಿಲ್ಲ. ಏಕೆಂದರೆ ಸೌಂದರ್ಯವು ಒಂದು ಅನುಭವ, ಅನುಭೂತಿಯ ಪ್ರಶ್ನೆಯಾಗಿರುವುದರಿಂದ ಮತ್ತು ಕೇವಲ ಲಕ್ಷಣವಾದ ಆಕಾರದ ಪ್ರಶ್ನೆಯಾಗಿಲ್ಲದಿರುವುದರಿಂದ ಜೀವನ್ಮಯವಾದ ಕಾಮ ಇಲ್ಲದ ಲಕ್ಷಣವಂತೆಯಷ್ಟು ಕುರೂಪಿ ಇನ್ನಾರು ಇದ್ದಾರು !

ಕಾಮ ಎಂದರೇನೊ ನಾವರಿಯುವು. ಆದರೆ ಅದೊಂದು ಬಗೆಯ ಬೆಂಕಿ. ಏಕೆಂದರೆ ಅದು ಯಾವಾಗಲೂ ಒಂದು ಬಗೆಯ ಉಜ್ವಲತೆ, ಉತ್ಸಾಹಗಳನ್ನು ನೀಡುತ್ತವೆ. ಆ ಬೆಂಕಿ ಶುದ್ಧ ಜಾಜ್ವಲ್ಯಮಾನವಾದಾಗ ನಮಗೆ ಸೌಂದರ್ಯಾನುಭವವಾಗುತ್ತದೆ. ಈ ಜಾಜ್ವಲ್ಯಮಾನ ಕಾಮ ಅಳಿದ ಕೂಡಲೇ ನಾವು ಕೇವಲ ಬದುಕಿರುವ

ವಿಕಲ ಶವಗಳಾಗಿ ಹೋಗುತ್ತೇವೆ.

ಕಾಮ ಸಂಪೂರ್ಣ ಅಳಿದಂಥ ಮನುಷ್ಯ ಪ್ರಾಣಿಗಿಂತ ಕೊಳಕಾದ ಜೀವಿಯೇ ಇನ್ನಿಲ್ಲ. ಎಲ್ಲರೂ ಹೇಗಾದರೂ ಮಾಡಿ ದೂರೀಕರಿಸುವ ಒಂದು ನಿರ್ಜೀವ ವಸ್ತು ಅದು.

ಆದರೆ ನಾವು ಪೂರ್ಣ ಜೀವಂತವಾಗಿರುವಾಗ ಕಾಮ ನಮ್ಮೆಲ್ಲರೊಳಗೂ ಪ್ರಖರವಾಗಿ ಜ್ವಲಿಸುತ್ತದೆ. ಅದರ ಮೇಲೆ ನಮಗೆ ಹತೋಟಿ ಇದ್ದರೂ ಅದು ಕೊಂಚ ಮಾತ್ರ, ಆದಕ್ಕೆ ಸಮಾಜ ಅದನ್ನು ದ್ವೇಷಿಸುತ್ತದೆ.

ಆ ಕಾಮ ಅತಿ ಜಾಜ್ವಲ್ಯಮಾನವಾದಾಗ ಎಲ್ಲೋ ಒಂದೆಡೆ ಅದಕ್ಕೊಂದು ಉತ್ತರ ಕಾದಿರುತ್ತದೆ. ಜಗತ್ತೆಲ್ಲ ಜ್ವಲಿಸಿ ಜೀವನ ಆಶಾಮಯವಾಗಿ ಕಾಣಬಹುದು. ಆಗ ನೀವು "ಆಹಾ ಈಕೆ ನನಗೆ ತುಂಬ ಇಷ್ಟ. ಈಕೆ ಸುಂದರಿ" ಎಂದು ಯಾರತ್ತಲೋ ಅನ್ನಬಹುದು ಅಥವಾ ಮತ್ತೊಬ್ಬಾಕೆ ಇಡೀ ಜಗತನ್ನೇ ಜ್ವಲಿಸುವ ಮುನ್ನ ತನ್ನನ್ನೇ ಮೊದಲು ದೇದೀಪ್ಯಗೊಳಿಸಿಕೊಳ್ಳಬಹುದು. ಅನಂತರ ನೀವೆನ್ನಬಹುದು, "ಆಕೆ ರೂಪವತಿ, ನನಗೆ ಬಹು ಸುಂದರಿಯಾಗಿ ಕಾಣುವಳು" ಎಂದು.

ನಿಮ್ಮಲ್ಲಿ ನಿಜವಾದ ಸೌಂದರ್ಯಾನುಭವವನ್ನು ಉದ್ದೀಪನಗೊಳಿಸಲು ಅಪರೂಪವಾಗಿ ಸ್ತ್ರೀಗೆ ಸಾಧ್ಯ. ಏಕೆಂದರೆ ಹುಟ್ಟಾ ಸ್ತ್ರೀ ರೂಪವತಿ ಎನ್ನುವುದು ಅಸಾಧ್ಯ. ನಾವು ಹಾಗೆನ್ನುವುದು ನಮ್ಮ ಅಲ್ಪ ಹಾಗೂ ಅಸ್ಪಷ್ಟ ಸೌಂದರ್ಯ ಪ್ರಜ್ಞೆಯ ಕಾರಣವಾಗಿ. ಇಂದು ಸಹಸ್ರ ಸಹಸ್ರ ಲಕ್ಷಣವಂತೆ ಸ್ತ್ರೀಯರಿರಬಹುದು ಆದರೆ ನಿಜವಾದ ಸುರೂಪಿಯರು ಕೆಲವೇ.

ಹೀಗಾಗುವುದಾದರೂ ಏಕೆ? ಯಾರಲ್ಲೂ ನಿಜವಾದ ರಕ್ತಿ ಇಲ್ಲದಿರುವುದು ಕಾರಣ. ಲಕ್ಷಣವಂತೆ ಸೌಂದರ್ಯಮಯಿಯಾಗುವುದು, ಆಕೆ ನಿಷ್ಕಾಮಿಯಾಗಿರುವಾಗ ಅಲ್ಲ. ಆಕೆಯಲ್ಲಿ ರಕ್ತಿ ಅಥವಾ ಕಾಮ ಜ್ವಲಿಸುವಾಗ.

ಲಕ್ಷಣವಂತೆ, ಅಂದಗಾತಿಯರು ಎಂದರೆ ಸುಲಕ್ಷಣ ಹಾಗೂ ಹಳದಿ ಕೂದಲಿರುವವರು ಎಂದಾಗಬಹುದು. ಆದರೆ ಸೌಂದರ್ಯವತಿ ಎಂದರೆ ಒಂದು ಅನುಭವ. ನಮ್ಮಲ್ಲಿ ಕಾಮ ಅಥವಾ ರಕ್ತಿಯನ್ನು ಜಾಜ್ವಲ್ಯಗೊಳಿಸುವ ದೇದೀಪ್ಯಮಾನ ಶಕ್ತಿ.

ಜೀವನ ಶಕ್ತಿಗೆ ನಾವು ಕೇವಲ ಅನುರಕ್ತಿ ಎಂದು ಸಣ್ಣ ಅರ್ಥದ ಪದ ಉಪಯೋಗಿಸುತ್ತಿರುವುದು ದುಃಖಕರ. ಯಾವ ಮನುಷ್ಯನೂ, ಓರ್ವ ಸ್ತ್ರೀ ತನ್ನ ಅನುರಕ್ತಿಯಿಂದ ಆತನ ಜೀವಶಕ್ತಿಯನ್ನು ಉಜ್ವಲಗೊಳಿಸಿದಾಗ, ಬದುಕು ಎಷ್ಟು ಸತ್ವಪೂರ್ಣವಾಗಿ ಇತರ ಸ್ಥಿತಿಯಲ್ಲಿ ಬದುಕಲಾರನು ಮತ್ತು ಯಾವ ಸ್ತ್ರೀಯೂ ಮತ್ತೋರ್ವ ಮನುಷ್ಯನಿಂದ ಜೀವೋದ್ದೀಪನಗೊಂಡಾಗ ಬದುಕುವಷ್ಟು ಸಮಗ್ರವಾಗಿ ಅನ್ಯತ್ರ ಬದುಕಲಾರಳು.

ನಮ್ಮ ಕಾಮವನ್ನು ಸ್ವಚ್ಛವಾಗಿ, ಸೂಕ್ಷ್ಮವಾಗಿ ಉಳಿಸಲಿಕ್ಕೂ, ಬೆಳೆಸಲಿಕ್ಕೂ ನವೀನ ಜಗತ್ತು ಅವಕಾಶವಿತ್ತಿದ್ದರೆ, ಪ್ರಖರವಾಗಿ ಜಾಜ್ವಲ್ಯಮಾನವಾಗಿ ಬೆಳಗಿ

ಸಲು ದಾರಿ ತೋರಿದ್ದರೆ. ತಕ್ಕ ಜೀವನಕ್ರಮ ಒಂದನ್ನು ರೂಪಿಸಿದ್ದರೆ. ನಾವೆಲ್ಲರೂ ನಮ್ಮ ಜೀವಮಾನಾದ್ಯಂತವನ್ನೂ ಪ್ರೇಮ. ಆಸಕ್ತಿ ಜೀವನೋತ್ಸಾಹದಿಂದ ಕಳೆಯುತ್ತಿದ್ದೆವು. ಜಗತ್ತನ್ನೇ ಜೀವ ದೇದೀಪ್ಯಮಾನಗೊಳಿಸುತ್ತಿದ್ದಿತು....

ಆದರೆ ಇಂದಿನ ಜೀವನದ, ಜೀವದ ಒಳಗಡೆ ಈಗ ಎಂಥ ಅಗಾಧ ಬೂದಿರಾಶಿ ಮುಸುಕಿದೆ !

(೧೯೬೪ರಲ್ಲಿ ಮೈಸೂರಿನಿಂದ ಪ್ರಕಟಗೊಳ್ಳುತ್ತಿದ್ದ 'ಲಹರಿ' ಸಾಹಿತ್ಯ ಪತ್ರಿಕೆಯಿಂದ ಈ ಬರಹ ಬಳಸಿಕೊಳ್ಳಲಾಗಿದೆ.)

## ಕಣ್ಣೋಟ

ಗೆಳತಿ, ನೀ ನನ್ನೆಡೆಗೆ
ಬೀರುವ ಕಣ್ಣೋಟ
ತರಹೇವಾರಿ ಹೂವು ಸುರಿಸುವ
ಮತಾಪು ಕಡ್ಡಿ.
ಗೆಳತಿ, ಬೇರೆಯುವನೆಡೆಗೆ
ನೀ ಹರಿಸುವ ಕಣ್ಣೋಟ
ನನ್ನ ಹೃದಯದ ಆಟಂಬಾಂಗೆ
ನೀ ಹಚ್ಚಿಟ್ಟ ಬೆಂಕಿ ಕಡ್ಡಿ.

—ವಿಶು

# ಕನ್ನಡದಲ್ಲಿ ಬಂಡಾಯ ಸಾಹಿತ್ಯ

● ಡಾ. ಬಸವರಾಜ ಸಬರದ

'ಬಂಡಾಯ' ಎಂಬ ಹೆಸರು ಕೇಳಿದಾಕ್ಷಣವೇ ಕೆಲವರು ವಿಚಿತ್ರವಾದ ಪ್ರತಿಕ್ರಿಯೆ ತೋರಿಸುತ್ತಾರೆ. ಮತ್ತೆ ಕೆಲವರಿಗೆ ಆ ಶಬ್ದವೇ ವಾಕರಿಕೆ. ಇನ್ನು ಕೆಲವರು ಬಂಡಾಯ–ಡಂಬಾಯ–ಸಮುದಾಯ; ದಲಿತ–ಬಲಿತ–ಕಲಿತ ಮುಂತಾದ ಪ್ರಾಸಬದ್ಧ ಮಾತುಗಳನ್ನು ಪೋಣಿಸುತ್ತ ತಮ್ಮ ಭ್ರಮಾಲೋಕದಲ್ಲೇ ಖುಷಿ ಪಡುತ್ತಾರೆ. ಇವರಲ್ಲಿ ಬಂಡಾಯ ಸಾಹಿತ್ಯದ ಬಗೆಗ ಸ್ಪಷ್ಟ ತಿಳುವಳಿಕೆಯಿಲ್ಲದವರು ಕೆಲವರಾದರೆ, ವ್ಯವಸ್ಥೆಯ ಬೇರುಗಳನ್ನು ಗಟ್ಟಿಗೊಳಿಸಲೆತ್ನಿಸುವ ಪಟ್ಟಭದ್ರ ಹಿತಾಸಕ್ತಿಗಳು ಇನ್ನುಳಿದವರು. ಯಾವುದೇ ಕ್ಷೇತ್ರದಲ್ಲಿ ಹೊಸದು ಪ್ರವೇಶಿಸಿದಾಗ ಹೀಗೆ ಆಗುವುದು ಸಹಜವೆಂಬುಂತೆ ನಮ್ಮ ಚರಿತ್ರೆಯಲ್ಲಿ ಉದಾಹರಣೆಗಳಿವೆ. ಬಂಡಾಯ ಸಾಹಿತ್ಯ ಚಳವಳಿ ಬಗೆಗೂ ಹೀಗೆ ಆಡಿಕೊಂಡರೆ ಅದು ಅವರ ಮಿತಿಗಳನ್ನು ಸೂಚಿಸುತ್ತದೆಯೇ ವಿನಃ ಸಂಘಟನೆಯ ವೈವಿಧ್ಯತೆಯನ್ನಲ್ಲ.

ಬಂಡಾಯ ಸಾಹಿತ್ಯ ಚಳವಳಿ ದಿಢೀರನೆ ಒಮ್ಮೆಲೇ ಹುಟ್ಟಿಕೊಂಡದ್ದಲ್ಲ. ಸಮಾಜದ ಅನಿವಾರ್ಯತೆಯಿಂದ ಈ ನೆಲದಲ್ಲೇ ಮೊಳಕೆಯೊಡೆದು ಹೊರಬಂದ ಪ್ರಗತಿಪರ ವಿಚಾರದ ಸಾಂಸ್ಕೃತಿಕ ಸಂಘಟನೆಯೇ ಈ ಚಳವಳಿ. ಕನ್ನಡ ಸಾಹಿತ್ಯ ಪರಿಷತ್ತಿನ ವಿರೋಧಕ್ಕಾಗಿಯೇ ಬಂಡಾಯ ಸಾಹಿತ್ಯ ಸಂಘಟನೆ ಹುಟ್ಟಿಕೊಂಡಿಲ್ಲ. ಕನ ಡ ಸಾಹಿತ್ಯದ ಪ್ರಮುಖ ಕಾಳಜಿಯಾಗಿರುವ ಪ್ರತಿಭಟನೆಯ ಸತ್ವ ಬಂಡಾಯ ಸಾಹಿತ್ಯದಲ್ಲಿ ಪಲ್ಲವಿಸಿದೆ. **ಬಂಡಾಯದವರು ಸಂಪ್ರದಾಯ ವಿರೋಧಿಗಳೇ ಹೊರತು ಪರಂಪರೆಯನ್ನು ಅಲ್ಲಗಳೆಯುವವರಲ್ಲ.** ಸಾಹಿತ್ಯಪರಿಷತ್ತು ಇಂತಹ

---

ಬಂಡಾಯದವರು ಸಂಪ್ರದಾಯ ವಿರೋಧಿಗಳೇ ಹೊರತು ಪರಂಪರೆಯನ್ನು ಅಲ್ಲಗಳೆಯುವವರಲ್ಲ—ಎಂಬ ಮಾತನ್ನು; ಬಂಡಾಯ ಸಾಹಿತ್ಯ ವಿರೋಧಿಸಿ ಮಾತಾಡುವವರಿಗೆ ಮನವರಿಕೆಯಾಗುವಂತೆ ಮತ್ತೆ ಒತ್ತಿ ಹೇಳುವ ಅಗತ್ಯವಿದೆ. ನಾವು ಕನ್ನಡದ ಸಂದರ್ಭದಲ್ಲಿ ಕಾಲಕಾಲಕ್ಕೆ ಹುಟ್ಟಿದ, ಬೆಳೆದ ಸಾಹಿತ್ಯಕ / ಸಾಂಸ್ಕೃತಿಕ ಚಳವಳಿಗಳ ಒಂದೊಂದು ಹಂತದ (ಎಲ್ಲಾ ಚಳುವಳಿಗಳ) ಬಗ್ಗೆ ಲೇಖನಗಳನ್ನು ಪ್ರಕಟಿಸುವ ಆಶಯ ಹೊಂದಿದ್ದೇವೆ. ಡಾ|| ಬಸವರಾಜ ಸಬರದ ಅವರ ಈ ಬರಹ ಇಂಥ ಒಂದು ಚಳವಳಿಯ ಹೊಸ ಆಶಯದ ಒಟ್ಟು ಚಲನಗತಿಯನ್ನು ಗುರ್ತಿಸುವಲ್ಲಿ ಯಶಸ್ವಿಯಾಗಿದೆಯೆಂದು ನಾವು ಭಾವಿಸಿದ್ದೇವೆ.

—ಸಂಪಾದಕ

---

ಒಂದು ಸಾಂಪ್ರದಾಯಿಕ ಸಂಸ್ಥೆಯಾದ್ದರಿಂದ ಬಂಡಾಯ ಸಂಘಟನೆಯ ವಿರೋಧಕ್ಕೆ ಗುರಿಯಾದದ್ದು ತೀರಾ ಸಹಜ. ಒಂದು ವೇಳೆ ಸಾಹಿತ್ಯಪರಿಷತ್ತಿನ ಸ್ವರೂಪದಲ್ಲಿ ಬದಲಾವಣೆಗಳಾದರೆ, ಬಂಡಾಯದವರ ನಿಲುವೂ ಪರಿಷತ್ತಿನ ಬಗೆಗೆ ಬದಲಾಗ ಬಹುದು. ಅದೇ ರೀತಿ ಬಂಡಾಯದವರು ಕೇವಲ ಬ್ರಾಹ್ಮಣಜಾತಿ ವಿರೋಧಿಗಳಲ್ಲ; ಇಡೀ ಜಾತಿವ್ಯವಸ್ಥೆಯ ವಿರೋಧಿಗಳು. ಜಾತಿರಹಿತ–ವರ್ಗರಹಿತವಾದ ಮಾನವೀಯತೆ ಮಿಡಿಯುವ ಹೊಸ ಸಮಾಜದ ನಿರ್ಮಾಣವೇ ಬಂಡಾಯ ಸಾಹಿತಿಯ ಗುರಿ.

೧೯೭೯ರ ಮಾರ್ಚ್ ೧೦ ಹಾಗೂ ೧೧ ರಂದು ಬೆಂಗಳೂರಿನಲ್ಲಿ ರಾಜ್ಯಮಟ್ಟದ ಪ್ರಥಮ ಬಂಡಾಯ ಸಾಹಿತ್ಯ ಸಮ್ಮೇಳನ ನಡೆದು ಕನ್ನಡ ಸಾಹಿತ್ಯದ ಸಮಕಾಲೀನ ಕಾಳಜಿಗೆ ಭದ್ರ ನೆಲೆಯೊದಗಿಸುವುದರ ಮೂಲಕ ಹೊಸ ದಿಕ್ಕುಗಳನ್ನು ಸೂಚಿಸಿತು. ಅಂದಿನಿಂದ ಇಂದಿನವರೆಗೆ ಬೆಂಗಳೂರು-ಬಿಜಾಪುರ–ರಾಯಚೂರು–ಕೋಲಾರಗಳಲ್ಲಿ ರಾಜ್ಯಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನಗಳು ನಡೆದು ಸಂಘಟನೆಯ ಅನಿವಾರ್ಯತೆಯನ್ನು ಬಂಡಾಯ ಸಾಹಿತ್ಯದ ಅವಶ್ಯಕತೆಯನ್ನು ಸಾಬೀತುಪಡಿಸಿವೆ.

ಬಂಡಾಯ ಸಾಹಿತ್ಯ ಚಳವಳಿ ಗುಂಪುಗಾರಿಕೆಯಿಂದ ಹುಟ್ಟಿಕೊಂಡದ್ದಲ್ಲ; ಸ್ವಪ್ರತಿಷ್ಠೆ–ಸ್ವಾಭಿಮಾನ ಮೆರೆಯಲು ಮಾಡಿಕೊಂಡ ವೇದಿಕೆಯಲ್ಲ. ಎಲ್ಲ ಜನಪರ ನಿಲುವಿನ ಬರಹಗಾರರು ಲಿಂಗ–ಜಾತಿ–ವರ್ಗ–ಪ್ರಾದೇಶಿಕತೆಯ ಭೇದಗಳನ್ನು ಹರಿದೊಗೆದು ಒಂದೇ ವೇದಿಕೆಯ ಮೇಲೆ ಬಂದು ಸಂಘಟಿತರಾಗಿ ಬಂಡಾಯದ ಹೆಸರಿನಲ್ಲಿ ಪ್ರಗತಿಪರ ವಿಚಾರಗಳನ್ನು ಪ್ರತಿಪಾದಿಸುತ್ತಾ ಬದುಕು–ಬರಹಗಳನ್ನು ಒಂದಾಗಿಸುತ್ತಾ ಕನ್ನಡ ಸಾಹಿತ್ಯದಲ್ಲಿ ಹಿಂದೆಂದೂ ಕಾಣದಂತಹ ರಾಜಕೀಯ ಪ್ರಜ್ಞೆಯನ್ನು ಪ್ರಕಟಿಸುತ್ತಾ ಎಡಪಂಥೀಯ ಧೋರಣೆಗಳಿಗೆ ಬದ್ಧರಾಗಿ ಬರೆಯುತ್ತಿದ್ದಾರೆ, ವ್ಯವಸ್ಥೆಯ ವಿರುದ್ಧ ಬದುಕುತ್ತಿದ್ದಾರೆ.

ಎಪ್ಪತ್ತರ ದಶಕ 'ಬಂಡಾಯ' ಹದಗೊಳ್ಳುತ್ತಿದ್ದ ಕಾಲ. ನವ್ಯದಿಂದ ಬೇಸತ್ತ ಕನ್ನಡಿಗರು ಹೊಸ ಸಾಹಿತ್ಯಕ್ಕಾಗಿ ತಡಕಾಡುತ್ತಿದ್ದ ಸಮಯ. ಹೊಸ ಚಳವಳಿಯೊಂದು ಉದಯವಾಗಲು ಹಾತೊರೆಯುತ್ತಿದ್ದ ಸಂಕ್ರಮಣಾವಸ್ಥೆ. ನವ್ಯದ ಹುಟ್ಟಿಗೆ ನವೋದಯದ ಮಿತಿಗಳು ಕಾರಣವಾದರೆ, ನವೋದಯ–ನವ್ಯ ಎರಡೂ ಸಾಹಿತ್ಯ ಪಂಥಗಳು ತುಂಬಿಕೊಡಲಾರದ ಹೊಸ ಅಂಶಗಳೇ ಬಂಡಾಯ ಸಾಹಿತ್ಯ ಚಳುವಳಿಯ ಪ್ರೇರಣೆಗಳೆನ್ನಬಹುದು.

ನವೋದಯ ಕಾವ್ಯ ಪಾಶ್ಚಾತ್ಯರ ರಮ್ಯ ಸಂಪ್ರದಾಯದಿಂದ ಪ್ರಭಾವಗೊಂಡು ಬೆಳೆದು ತನ್ನ ಗೇಯತೆ–ಪ್ರಾಸಬದ್ಧತೆ ಮುಖಾಂತರ ಸಮಕಾಲೀನ ಆಶೋತ್ತರಗಳಿಗೆ ರೆಕ್ಕೆ ಹಚ್ಚಿ ಕುಣಿದಾಡಿತು. ನಾಡು–ನುಡಿ–ನಿಸರ್ಗ–ಆಧ್ಯಾತ್ಮ–ಸಾಮಾಜಿಕತೆ ಪ್ರೇಮ–ಕಾಮ ಈ ಮೊದಲಾದ ವಿಷಯ ವೈವಿಧ್ಯತೆಯಿಂದ ನವೋದಯ ಗರಿಗೆದರಿತಾದರೂ. ಸುಧಾರಣೆಯಲ್ಲೇ ತೃಪ್ತಿಪಟ್ಟುಕೊಂಡದ್ದು, ಹೊಸ ಸಮಾಜದ ಹುಟ್ಟನ್ನು ಗರ್ಭೀಕರಿಸಿಕೊಳ್ಳುವ ಬದಲು ಇದ್ದ ವ್ಯವಸ್ಥೆಯನ್ನೇ ರಿಪೇರಿ ಮಾಡಲು

ಹೊರಟದ್ದು ಈ ಕಾವ್ಯದ ಮಿತಿಗಳೆನ್ನಬಹುದು. ಇದರಿಂದ ಬೇಸತ್ತ ನವ್ಯದವರು ಜಿಡ್ಡುಗಟ್ಟಿದ ಪಡಿವಂಕಿಕೆಯಿಂದ ಕೊಡವಿಕೊಂಡು, ಅದರ ಯಾಂತ್ರಿಕ ಬಂಧನದಿಂದ ಬಿಡಿಸಿಕೊಂಡು ಕನ್ನಡಕ್ಕೆ ಹೊಸ ನುಡಿಗಟ್ಟು ಜೋಡಿಸಿ, ಭಾಷೆಗೆ ಕಸುವು ಮೂಡಿಸಿ ಮುಕ್ತ ಛಂದಸ್ಸು ತಂದದ್ದು, ಆತ್ಮಶೋಧನೆ ಮಾಡಿಕೊಂಡದ್ದು, ನಿರ್ಭಿಡೆಯಾಗಿ ಬರೆದದ್ದು ನವ್ಯದವರ ಸಾಧನೆಯೆನ್ನಬಹುದು. ಆದರೆ ನವ್ಯರು ಸಾಹಿತ್ಯದಲ್ಲಿ ರತಿ ಸುಖವನ್ನು ಸ್ಖಲಿಸುವುದರಲ್ಲೇ ತನ್ಮಯರಾಗಿ, ದ್ವಂದ್ವದಲ್ಲಿ ಬಿದ್ದು ಗೊಂದಲಪುರ ದಿಂದ ಹೊರ ಬರದೆ ಮಣ್ಣಿನ ವಾಸನೆಗಾಗಿ ಪರಿತಪಿಸಿದ್ದು ನವ್ಯರ ದುರಂತವೆನ್ನ ಬಹುದು. ನವೋದಯ–ನವ್ಯ ಪರಿಚ್ಛರಲ್ಲೂ ಸಾಮಾಜಿಕ–ರಾಜಕೀಯ ಕಾಳಜಿಗಳಿಗೆ ಪ್ರಾಶಸ್ತ್ಯ ಸಿಗಲಿಲ್ಲ. ಅದು ಅಲ್ಲಲ್ಲಿ ಆಂಶಿಕವಾಗಿ ಬಂದರೂ ಬದ್ಧಸಾಹಿತ್ಯವಾಗಿ ಮೂಡಿಬರಲಿಲ್ಲ.

ಇಂದು ನಮ್ಮ ಕಣ್ಣೆದುರು ಕಾಣುವ ಶೋಷಣೆ, ಬದುಕಿನ ಭೀಕರತೆ, ಪಟ್ಟಭದ್ರರ ಕ್ರೌರ್ಯ, ಹಸಿವು, ಅಪಮಾನವೀಯತೆ, ಕೊಲೆ–ಸುಲಿಗೆಗಳು ನಮ್ಮ ಬದುಕನ್ನೇ ಅಲ್ಲಾಡಿಸಹತ್ತಿವೆ. ಬಂಡಾಯ ಸಾಹಿತಿ ಇದೆಲ್ಲವನ್ನೂ ತೆರೆದ ಕಣ್ಣಿನಿಂದ ಕಾಣುತ್ತಾನೆ, ಮುಕ್ತ ಮನಸ್ಸಿನಿಂದ ನೋಡುತ್ತಾನೆ. ನೊಂದವರ–ಶೋಷಿತರ ದನಿಯಾಗಿ ನಿಲ್ಲುತ್ತಾನೆ.

'ನವ್ಯ' ಅವಸಾನವಾಗುತ್ತಿರುವ ಸಂದರ್ಭದಲ್ಲಿ ಬಂದ 'ದ್ಯಾವನೂರು', 'ಹೊಲೆ ಮಾದಿಗರ ಹಾಡು', 'ಒಂದು ಊರಿನ ಕಥೆ', 'ಮುಸ್ಸಂಜೆಯ ಕಥಾಪ್ರಸಂಗ', 'ಅಬಚೂರಿನ ಪೋಸ್ಟಾಫೀಸು', 'ಒಂದು ಹುಡುಗನಿಗೆ ಬಿದ್ದ ಕನಸು', 'ಕರಿತೆಲಿ ಮಾನವನ ಜೀಪದ'—ಈ ಮೊದಲಾದ ಕೃತಿಗಳಲ್ಲಿ ಹೊಸ ತಿರುವೊಂದರ ಸ್ಪಷ್ಟ ಸೂ ಚ ನೆ ಯಿ ದೆ. ಸಾಹಿತ್ಯಕ್ಷೇತ್ರದಲ್ಲಿ ದಲಿತರು-ಶೋಷಿತರು–ಕೆಳವರ್ಗದವರೆಂದು ವಂಚಿಸಲ್ಪಟ್ಟವರು ಸಾಹಿತ್ಯವನ್ನು ತಮ್ಮ ಅಭಿವ್ಯಕ್ತಿ ಮಾಧ್ಯಮವನ್ನಾಗಿ ಮಾಡಿ ಕೊಂಡು ಗುಡುಗಿದ್ದು, ಸಿಡಿದದ್ದು ಇದೇ ಸಂದರ್ಭದಲ್ಲಿ ಇದು ಕನ್ನಡ ಸಾಂಸ್ಕೃತಿಕ ಕ್ಷೇತ್ರದ ಹೊಸ ತಿರುವು ಮತ್ತು ಸಾಹಿತ್ಯದಲ್ಲಿ ಅತ್ಯಂತ ಮಹತ್ವಪೂರ್ಣ ವಾದ ಪ್ರಸಂಗ. ಇದೇ ಬಂಡಾಯ ಸಾಹಿತ್ಯ ಚಳುವಳಿಗೆ ಮೂಲಬೀಜ. ಕ್ರೂರ ವ್ಯವಸ್ಥೆಯ ವಿರುದ್ಧ, ಯಜಮಾನ ಸಂಸ್ಕೃತಿಯ ಎಲ್ಲಾ ಸಂಚುಗಳ ವಿರುದ್ಧ ಬಂಡೆದ್ದ ಪ್ರಗತಿಪರ ಮನೋಧರ್ಮವೇ ಬಂಡಾಯ ಸಾಹಿತ್ಯ ಚಳವಳಿಯ ಮೂಲ ಸತ್ವವಾಯಿತು.

## ಪರಂಪರೆ

ಈ ಮೊದಲೇ ತಿಳಿಸಿದಂತೆ ಬಂಡಾಯ ಸಾಹಿತಿಗಳಿಗೊಂದು ಪರಂಪರೆ ಇದೆ. ಆದರೆ ಬಂಡಾಯದವರು ಸಂಪ್ರದಾಯ ವಿರೋಧಿಗಳೆಂಬುದನ್ನು ಮರೆಯಬಾರದು. ಸಂಪ್ರದಾಯ ನಿಂತ ನೀರಾದರೆ, ಪರಂಪರೆ ಹರಿವ ಹೊಳೆ. ಸಮಕಾಲೀನ ಮೌಲ್ಯ

ಗಳು ಆಯಾ ಕಾಲಕ್ಕೇ ಸ್ಥಗಿತಗೊಂಡರೆ ಅದು ಸಂಪ್ರದಾಯ. ಸಮಕಾಲೀನ ಮೌಲ್ಯಗಳು ಸಾರ್ವಕಾಲಿಕ ಮಹತ್ವವನ್ನು ಪಡೆದರೆ ಅದು ಪರಂಪರೆ. ಜಿಡ್ಡುಗಟ್ಟಿದ ಸಾವು ಸಂಪ್ರದಾಯದಲ್ಲಿದ್ದರೆ, ಹರಿವ ಉತ್ಸಾಹ ಪರಂಪರೆಯಲ್ಲಿದೆ. ಪ್ರಸಿದ್ಧ ನಾಟಕಕಾರ ಬರ್ಟೋಲ್ಟ್ ಬ್ರೆಕ್ಟ್ ಹೇಳಿದಂತೆ 'ಪರಂಪರೆಯು ಜೊತೆಗೆ ಸಂಬಂಧ ಮತ್ತು ಮುಂದುವರಿಕೆ' ಬಂಡಾಯದವರ ಸ್ಪಷ್ಟ ನಿಲುವು. (ವಿವರಕ್ಕಾಗಿ ನೋಡಿ: ಬರಗೂರು ರಾಮಚಂದ್ರಪ್ಪನವರ 'ಬಂಡಾಯ ಸಾಹಿತ್ಯ ಚಳವಳಿ' ಮತ್ತು ಬೆಂಗಳೂರು ವಿಶ್ವವಿದ್ಯಾಲಯದ 1983 ಜನವರಿ–ಮಾರ್ಚ್‌ನ 'ಸಾಧನೆ'ಯಲ್ಲಿ ಪ್ರಕಟವಾದ ನನ್ನ ಲೇಖನ 'ಅಂಬಿಗರ ಚೌಡಯ್ಯನ ವಚನಗಳಲ್ಲಿ ಪರಂಪರೆ').

'ಬಂಡಾಯ' ಎಂಬ ಹೆಸರಿನಿಂದ ಸಂಘಟಿತರಾಗಿ ಹಿಂದಿನವರು ಬರೆಯದಿದ್ದರೂ ಅವರ ಬರಹದಲ್ಲಿ ಆಂಶಿಕವಾಗಿ ಬಂಡಾಯ ಮನೋಧರ್ಮ ಪ್ರಕಟವಾಗಿದೆ. ಈ ಬಂಡಾಯ ಮನೋಧರ್ಮ ಅಂದಂದಿನ ಚಾರಿತ್ರಿಕ ಒತ್ತಡಗಳನ್ನು ಅವಲಂಬಿಸಿರುವುದರಿಂದ ಹಿಂದಿನ ಸಾಹಿತಿಗಳ ಮಿತಿಗಳೊಂದಿಗೆ ಅಲ್ಲಿರುವ ಬಂಡಾಯ ಮನೋಧರ್ಮವನ್ನು ಗುರುತಿಸುವ ಇಂದಿನ ಬಂಡಾಯ ಸಾಹಿತಿ ಅಂತಹ ಸಾಹಿತ್ಯವನ್ನು ತನ್ನ ಪರಂಪರೆಯೆಂದು ಪರಿಗಣಿಸುತ್ತಾನೆ.

ಪಂಪ ಕನ್ನಡದ ಆದಿಕವಿ ಮತ್ತು ಅಗ್ರಕವಿಯೆಂದು ಹೆಸರಾದವನು. ರಾಜಾಶ್ರಯದಲ್ಲಿದ್ದುಕೊಂಡು ಆಶ್ರಯದಾತ ಅರಿಕೇಸರಿಯನ್ನೇ (ಹೆಸರಿಗೆ ಅರ್ಜುನ) ಕಥಾನಾಯಕನನ್ನಾಗಿ ಮಾಡಿಕೊಂಡಿದ್ದರೂ 'ನೆನೆಯದಿರಣ್ಣ ಭಾರತದೊಳ್, ಇನ್‌ಪೆರರಾರುಮನ್ ಒಂದೇ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ..........ಕರ್ಣರಸಾಯನಮತ್ತೆ ಭಾರತಂ' ಎಂದು ತನ್ನ ಪಂಪಭಾರತದಲ್ಲಿ ಕರ್ಣನ ನನ್ನಿ. ಪ್ರಾಮಾಣಿಕತೆ, ತ್ಯಾಗ, ಪರಾಕ್ರಮ, ವಿಶಾಲ ಮನೋಭಾವವನ್ನು ವರ್ಣಿಸುತ್ತಾ ಕಥಾನಾಯಕನಿಗಿಂತ ಕರ್ಣನಲ್ಲಿ ಕವಿ ಒಲವು ತೋರಿಸಿರುವುದನ್ನು ನೋಡಿದರೆ ಪಂಪನ ಈ ಧೋರಣೆ ಅಂದಿನ ಸಂದರ್ಭದಲ್ಲಿ ಪ್ರಗತಿಪರವೆಂದೇ ಹೇಳಬೇಕಾಗುತ್ತದೆ. ಮತ್ತೊಂದು ಸನ್ನಿವೇಶದಲ್ಲಿ ಮಹಾಭಾರತದ ಎಲ್ಲಾ ಪ್ರಮುಖ ಪಾತ್ರಗಳ ಗುಣವಿಶೇಷತೆಯನ್ನು ಪ್ರಕಟಿಸುತ್ತಾ ಧರ್ಮದೊಳ್–ಯಮಸೂನು. ನನ್ನಿಯೊಳ್–ಇನತನಯ, ಗಂಡಿನೊಳ್–ಭೀಮಸೇನ. ಛಲದೊಳ್–ದುರ್ಯೋಧನ ಎಂದು ವಿವರಿಸುತ್ತಾ ಮಹಾಭಾರತದಲ್ಲಿ ದೇವರೆಂದೇ ಮೆರೆಯಲ್ಪಟ್ಟ ಕಪಟ ನಾಟಕ ಸೂತ್ರಧಾರಿ ಕೃಷ್ಣನನ್ನೇ ಕೈಬಿಟ್ಟಿರುವುದು ಪಂಪನ ಸ್ವತಂತ್ರ ಮನೋಭಾವಕ್ಕೆ ಸಾಕ್ಷಿ. ಆದಿ ಪುರಾಣದ ಭೋಗಲೋಕ ವರ್ಣನೆಯಲ್ಲೂ ಕವಿಯ ಸ್ವತಂತ್ರ ಮನೋಭಾವವನ್ನು ಕಾಣಬಹುದು. ಮಾತೆತ್ತಿದರೆ ಕುಲವನ್ನು ಮುಂದು ಮಾಡುವ ಅಂದಿನ ಸಂದರ್ಭದಲ್ಲಿ ಕವಿ ಪಂಪ ಕರ್ಣನ ಮುಖಾಂತರ ಅಭಿವ್ಯಕ್ತಿಸುವ 'ಕುಲಂ ಕುಲಮಲ್ತು. ಚಲಂ ಕುಲಂ ಗುಣಂ ಕುಲಂ, ಅಭಿಮಾನಮೊಂದೆ ಕುಲಂ' ಎನ್ನುವ ಮಾತು ಪಂಪನ ವಿಶಾಲಮನೋಭಾವಕ್ಕೆ ಸಾಕ್ಷಿಯಾಗಿದೆ. ಪಂಪನ ಸಮಕಾಲೀನನಾದ ರನ್ನನ ದುರ್ಯೋಧನ ಖಳನಾಯಕನಲ್ಲ

ಪ್ರತಿನಾಯಕ್. ಈ ಬದುಕಿನಲ್ಲಿ ಹುಟ್ಟಿನಿಂದಾರೂ ನಾಯಕ-ಖಳನಾಯಕರಾಗಿರುವ ದಿಲ್ಲ, ಅವರು ಬದುಕಿರುವ ಸಮಾಜ ವ್ಯವಸ್ಥೆ-ಸಂದರ್ಭ ಅವರನ್ನು ಹಾಗೆ ನಿರ್ಮಿಸುತ್ತವೆ ಎನ್ನುವ ದಟ್ಟ ಸತ್ಯವನ್ನು ಸಾರುವ ರನ್ನನ ಗದಾಯುದ್ಧ ನಿಜಕ್ಕೂ ಗಮನಾರ್ಹವಾದ ಕೃತಿ. 'ನೆಲಕಿರಿಪೆನೆಂದು ಬಗೆವಿರೆ ಛಲಕಿರಿವೆಂ' ಎನ್ನುವ ರನ್ನನ ದುರ್ಯೋಧನನಿಗೆ ಈ ನೆಲ ಕರ್ಣನನ್ನು ಕೊಲ್ಲಿಸಿದ ಹಾಳು ನೆಲವಾಗಿ ಕಾಣುತ್ತದೆ. ದುರ್ಯೋಧನನ ಮಾನವೀಯತೆ. ಛಲ. ಅಭಿಮಾನಗಳನ್ನು ಪ್ರಕಟಿಸುವ ರನ್ನನ ಗದಾಯುದ್ಧದಲ್ಲಿ ಹೊಸ ದೃಷ್ಟಿಕೋನವಿದೆ. ಮುಂದೆ ಬಂದ 'ಪಂಚತಂತ್ರ'ದ ಕತೆಗಳಲ್ಲೂ ಬಂಡಾಯದ ಅಂಶಗಳು ಸಾಕಷ್ಟಿವೆ. ಮೊದಲನೋಟಕ್ಕೆ ಪ್ರಾಣಿ ಕತೆಗಳೆಂದೆನಿಸಿದರೂ ಅಂದಿನ ಮಾನವ ಸಮಾಜದ ಸಂಘರ್ಷವನ್ನು ದುರ್ಗಸಿಂಹನ 'ಪಂಚತಂತ್ರ' ದಾಖಲಿಸುತ್ತದೆ. ರಾಜ್ಯಶಾಹಿಯಲ್ಲಿದ್ದುಕೊಂಡೇ ರಾಜ ಪ್ರಭುತ್ವವನ್ನು ವಿರೋಧಿಸುವ ಕೆಚ್ಚು 'ಪಂಚತಂತ್ರ'ದಲ್ಲಿದೆ.

ಮುಂದೆ ಬಂದ ವಚನ ಚಳವಳಿ ಇಂದಿನ ಬಂಡಾಯ ಚಳವಳಿಗೆ ಪ್ರಮುಖ ಪ್ರೇರಣೆ. ಜಾತಿ-ಮತ-ಪಂಥ-ಪ್ರದೇಶ-ಭಾಷೆ-ವರ್ಗ-ಲಿಂಗ ಇವೆಲ್ಲಾ ಭೇದಗಳನ್ನು ಹರಿದೊಗೆದು ಒಂದೇ ವೇದಿಕೆಯ ಮೇಲೆ ಬಂದು ಎಲ್ಲಾ ಕ್ಷೇತ್ರದಲ್ಲೂ ಬದಲಾವಣೆ ತಂದ ಹನ್ನೆರಡನೇ ಶತಮಾನದ ವಚನಕಾರರಲ್ಲಿ ನಿಜವಾದ ಬಂಡಾಯ ಮನೋಧರ್ಮವಿದೆ. ಧಾರ್ಮಿಕ ರಂಗದಿಂದಲೇ ಪ್ರಾರಂಭವಾದ ವಚನಕಾರರ ಹೋರಾಟ ಇನ್ನಿತರ ಅಂಶಗಳನ್ನು ಗೌಣಗೊಳಿಸಿದರೂ ಉಳಿದ ರಂಗಗಳಲ್ಲೂ ಸಾಕಷ್ಟು ಹೊಸದನ್ನು ತಂದಿದೆ. ವೇದಕ್ಕೆ ಒರೆಯ ಕಟ್ಟಿ. ಶಾಸ್ತ್ರಕ್ಕೆ ನಿಗಳವನ್ನಿಕ್ಕಿ, ಆಗಮದ ಮೂಗ ಕೊಯ್ದ ವಚನಕಾರರು. ವೇದ ಸಾರುವ ಯಜಮಾನ ಸಂಸ್ಕೃತಿಯನ್ನು ಧಿಕ್ಕರಿಸಿ, ಸಮಾನತೆ ತಂದದ್ದು. ಏಕದೇವೋಪಾಸನೆಯ ತಳಹದಿಯಲ್ಲಿ ಜಾತಿಪದ್ಧತಿ ವಿರೋಧಿಸಿದ್ದು, ಸ್ತ್ರೀಗೆ ಸಮಾನತೆ ಕಲ್ಪಿಸಿಕೊಟ್ಟದ್ದು, ಅಂತ್ಯಜರೆಂದು ಶತಮಾನಗಳಿಂದ ಕಡೆಗಣಿಸಲ್ಪಟ್ಟವರ ದನಿಯಾಗಿ ಮಾತನಾಡಿದ್ದು ಚರಿತ್ರೆಯಲ್ಲಿ ಎಂದಿಗೂ ಮರೆಯಲಾಗದ ಅಂಶ. ಪಂಡಿತರ ಸೊತ್ತಾಗಿದ್ದ ಹಳಸು ಚಂಪೂ ಶೈಲಿಯನ್ನು ಕೈಬಿಟ್ಟು ಜನಸಾಮಾನ್ಯರ ಆಡುನುಡಿಯನ್ನೇ ಸಾಹಿತ್ಯದಲ್ಲಿ ತಂದು 'ವಚನ'ದ ಮುಖಾಂತರ ತಮ್ಮ ಪ್ರಾಮಾಣಿಕ ಅನ್ನಿಸಿಕೆ-ಅನುಭವಗಳನ್ನು ನಿರ್ಭಿಡೆಯಿಂದ ಅಭಿವ್ಯಕ್ತಿಸಿದ್ದು ವಚನಕಾರರ ಸಾಹಿತ್ಯಕ ಸಾಧನೆ. ಈ ಚಳವಳಿಯ ಬೆನ್ನೆಲುಬಾಗಿ ದಲಿತರು-ಅಸ್ಪೃಶ್ಯರು-ದುಡಿಯುವ ವರ್ಗದವರೇ ಇದ್ದದ್ದು ಈ ಚಳವಳಿಯ ಮಹತ್ವವನ್ನು ಸಾರುತ್ತದೆ. ಶರಣರ ಇತಿಮಿತಿಗಳೇನೇ ಇದ್ದರೂ ಇದು ಕರ್ನಾಟಕದ ಮೊದಲ ಮಹತ್ವಪೂರ್ಣ ಚಳವಳಿ ಎನ್ನುವುದರಲ್ಲಿ ಸಂಶಯವಿಲ್ಲ. ಆದ್ದರಿಂದಲೇ ವಚನ ಚಳವಳಿಯ ಸಂದರ್ಭ ಧಾರ್ಮಿಕ-ಸಾಮಾಜಿಕ-ಸಾಹಿತ್ಯಕ ಕ್ಷೇತ್ರದಲ್ಲಿ ಹೊಸ ವ್ಯಾಖ್ಯಾನ ಬರೆದ ಕಾಲ.

ವಚನಕಾರರ ನಂತರ ಬಂದ ದಾಸರೂ ಕೂಡ ಗಮನಾರ್ಹರು. ದಾಸ ಸಾಹಿತ್ಯ

ದಲ್ಲಿ ಕಂಡುಬರುವ ಸಾಮಾಜಿಕ ವಿಡಂಬನೆ, ಮಡಿವಂತಿಕೆ ಬಗೆಗಿರುವ ಕಟು ವ್ಯಂಗ್ಯ; ಆಡುನುಡಿಯ ಸೊಗಸು ಇವೆಲ್ಲಾ ಮಹತ್ವದ ಅಂಶಗಳು. ರಾಜಶಾಹಿ ಇದ್ದಾಗ್ಯೂ ರಾಜಾಶ್ರಯದಿಂದ ದೂರವಿದ್ದು ಬೀದಿ ಬೀದಿಗೆ ದನಿಕೊಟ್ಟ ಸಂಗೀತದ ಮುಖಾಂತರ ಸಾಹಿತ್ಯವನ್ನು ಅಭಿವ್ಯಕ್ತಿಸಿದ್ದು ದಾಸರ ಪ್ರಮುಖ ಕೊಡುಗೆ. ಹರಿಯ ಬಗೆಗೆ ಅವರ ಭಕ್ತಿ ಎಂತಹದೇ ಇದ್ದರೂ, ದೊರೆದಾಸರಾಗದೆ–ಹರಿದಾಸರಾದದ್ದು ಗಮನಿಸಬೇಕಾದ ಅಂಶ. ಅದರಲ್ಲೂ ಕನಕದಾಸರನ್ನು ವಿಶೇಷವಾಗಿ ಗಮನಿಸಬೇಕಾಗುತ್ತದೆ. ಕೆಳವರ್ಗ ದಿಂದ ಬಂದ ಕನಕದಾಸರು ವೈದಿಕರು ಸಾಧಿಸದ್ದನ್ನು ಅದೇ ಧಾರ್ಮಿಕರಂಗದ ಮುಖಾಂತರ ಸಾಧಿಸಿ ತೋರಿಸಿದರು. ಅವರ 'ರಾಮಧ್ಯಾನ ಚರಿತ್ರೆ' ಈ ನಿಟ್ಟಿನಲ್ಲಿ ಉಲ್ಲೇಖಾರ್ಹವಾದದ್ದು. ರಾಗಿ–ಅಕ್ಕಿಗಳ ಮುಖಾಂತರ ಮೇಲ್ವರ್ಗ–ಕೆಳವರ್ಗಗಳ ಸಂಘರ್ಷವನ್ನು ಬಿಚ್ಚಿ ತೋರಿಸುವ ಜನಪರ ಆಶಯಗಳನ್ನೊಳಗೊಂಡ ಪ್ರಮುಖ ಕೃತಿ.

ರಾಜಕಾರಣದ ಅಮೂಲ್ಯವಾದ ಆಯಾಮಗಳನ್ನು ತೆರೆದು ತೋರಿಸುವ ಕುಮಾರವ್ಯಾಸನ 'ಭಾರತ ಕಥಾಮಂಜರಿ'ಯಲ್ಲೂ ಮಾನವೀಯ ಸಂಬಂಧಗಳಿವೆ. ಮುಂದೆ ಬಂದ ಸರ್ವಜ್ಞ ಕವಿಯಲ್ಲಿ ಕಾಣುವ ಪ್ರತಿಭಟನೆ ಬಹಳ ಮಹತ್ವದ್ದು. ಸರ್ವಜ್ಞ ಒಬ್ಬ ಸಮಾಜ ಸುಧಾರಣಾವಾದಿ. ಆತನ ವಚನಗಳಲ್ಲಿ ಕಾಣುವ ವಾಸ್ತವತೆ, ಸಾಮಾಜಿಕ ಪ್ರಜ್ಞೆ, ಆಡುನುಡಿ, ನಿರ್ಭಿಡೆ, ವ್ಯಂಗ್ಯ–ವಿಡಂಬನೆ ಇವೆಲ್ಲಾ ಗಮನಿಸಲೇ ಬೇಕಾದ ಅಂಶಗಳು. ಸಮಾಜದ ಮೂಢನಂಬಿಕೆ–ಅನಿಷ್ಟಗಳನ್ನು ಕಟುವಾಗಿ-ಖಾರ ವಾಗಿ ಟೀಕಿಸುವ ಸರ್ವಜ್ಞ ಬಂಡಾಯ ಪರಂಪರೆಯ ವಿಶಿಷ್ಟ ದನಿ.

ಇನ್ನು ಆಧುನಿಕ ಸಾಹಿತ್ಯದಲ್ಲಿ ಬರುವ ನವೋದಯ–ನವ್ಯ ಪ್ರಗತಿಶೀಲ ಸಾಹಿತಿ ಗಳಲ್ಲಿ ಕೆಲವರು ಬಂಡಾಯ ಮನೋಧರ್ಮವನ್ನು ಪ್ರಕಟಿಸಿದ್ದಾರೆ. ಆದರೆ ಇದು ಅವ ರಲ್ಲಿ ಆಂಶಿಕವಾಗಿ ಮಾತ್ರ ಪ್ರಕಟವಾಗಿದೆ. ಆಧ್ಯಾತ್ಮ ನಿಸರ್ಗದಲ್ಲೇ ನವೋದಯದವರು ತನ್ಮಯರಾದರೂ ಕೂಡ, 'ಪುಟ್ಟವಿಧವೆ' 'ಕುರುಡು ಕಾಂಚಾಣ'ದಂತಹ ಸಾಮಾಜಿಕ ಪ್ರಜ್ಞೆಯಿಂದ ಉರಿಯುತ್ತಿರುವ ಕವಿತೆಗಳನ್ನು ಬೇಂದ್ರೆ ಕೊಟ್ಟಿದ್ದಾರೆ. ದಲಿತರ–ಶೋಷಿತರ ನೋವು–ನಲಿವುಗಳನ್ನು ಕುವೆಂಪು ಅವರ ಎರಡೂ ಕಾದಂಬರಿಗಳು ಸಮರ್ಥವಾಗಿ ಹಿಡಿದಿಟ್ಟಿವೆ. ಪ್ರಗತಿಶೀಲರಲ್ಲಿ ನಿರಂಜನ–ಬಸವರಾಜ ಕಟ್ಟೀಮನಿ ಉಲ್ಲೇಖಾರ್ಹರು. ಸಮಾಜದ ಸೋಗಲಾಡಿತನವನ್ನಿವರು ತಮ್ಮ ಕಾದಂಬರಿಗಳಲ್ಲಿ ಬಿಚ್ಚಿ ತೋರಿಸಿದ್ದಾರೆ.

ಗದ್ಯಕ್ಕೆ ಹೊಸ ಕಸುವು ತಂದುಕೊಡುವುದರ ಮೂಲಕ ಸಾಮಾಜಿಕ ಪ್ರಜ್ಞೆ ಯಿಂದ ಬರೆದ ನವ್ಯದ ಪಿ ಲಂಕೇಶ, ಹರಿತವಾದ ಮೊನಚಿನ ಭಾಷೆಯೊಂದಿಗೆ ವಿಡಂಬಿಸುವ ಚಂಪಾ ಅವರ ಕಾವ್ಯ ನವ್ಯದ ಹಿನ್ನೆಲೆಯಿಂದ ಬಂದಿದ್ದರೂ ಬಂಡಾಯ ಪರಂಪರೆಯ ಭಾಗವಾಗಿವೆ. ಅದೇರೀತಿ ಕೆಲವು ವರ್ಷಗಳ ಹಿಂದೆ ಹುಟ್ಟಿಕೊಂಡ ಬರಹ ಗಾರರ ಒಕ್ಕೂಟ–ಪ್ರಗತಿಪಂಥ–ನವ್ಯೋತ್ತರ–ಪ್ರಗತಿಪರ ಸಾಹಿತ್ಯ ಇವಲ್ಲವನ್ನೂ ಬಂಡಾಯ ಸಾಹಿತ್ಯದ ಪರಂಪರೆಯ ಭಾಗವಾಗಿ ಗಮನಿಸಬೇಕಾಗಿದೆ.

ಈ ಮೇಲೆ ಉಲ್ಲೇಖಿಸಿದ ಉದಾಹರಣೆಗಳೆಲ್ಲಾ ಕನ್ನಡ ಸಾಹಿತ್ಯದಲ್ಲಿ ಬೆಳೆದು ಬಂದ ಪ್ರಗತಿಪರ ವಿಚಾರಗಳು. ಹೀಗೆಂದ ಕೂಡಲೇ ಇಲ್ಲಿ ಉಲ್ಲೇಖಿಸಿದವರೆಲ್ಲಾ ಬಂಡಾಯ ಸಾಹಿತಿಗಳಲ್ಲದಿರಬಹುದು. ಸಂಪ್ರದಾಯವನ್ನು ಮೀರಿ ತಮ್ಮ ಮಿತಿಗಳಲ್ಲೇ ಇವರು ಪ್ರಗತಿಪರ ಮನೋಭಾವಕ್ಕೆ ಸ್ಪಂದಿಸಿದವರು. ಕನ್ನಡ ಸಾಹಿತ್ಯದಲ್ಲಿ ಇಂತಹದೊಂದು ಪರಂಪರೆಯೆಂಬುದು ಬಂಡಾಯ ಸಾಹಿತಿಗೆ ಅಭಿಮಾನದ ಸಂಗತಿಯೇ ವಿನಃ ಪರಂಪರೆಯ ಪ್ರವಚನ ಮಾಡುವುದೇ ಆತನ ಗುರಿಯಲ್ಲ. ಹೊಸ ಸಾಂಸ್ಕೃತಿಕ ಪರಂಪರೆಯ ನಿರ್ಮಾಣ ಹಾಗೂ ಎಲ್ಲಂಪದ ಸಮಾನತೆಯನ್ನು ಹೊಂದಿದ ಸಮಾಜ ಕಟ್ಟುವುದು ಆತನ ಮುಖ್ಯ ಉದ್ದೇಶ.

## ಬಂಡಾಯ ಸಾಹಿತ್ಯ

ನವೋದಯ-ನವ್ಯ ಪಂಥಗಳು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಹುಟ್ಟಿಕೊಂಡಿದ್ದರೆ, ಬಂಡಾಯ ಸಾಹಿತ್ಯ ಈ ನೆಲದ ಅನಿವಾರ್ಯತೆಯಿಂದ ಮೂಡಿಬಂದದ್ದು. ಆದ್ದರಿಂದ ಬಂಡಾಯ ಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಟತೆಯಿದೆ. ಕನ್ನಡ ಸಾಹಿತ್ಯದ ಶಿಷ್ಟವಿಮರ್ಶೆಯ ಕನ್ನಡಕದಲ್ಲೇ ಬಂಡಾಯ ಸಾಹಿತ್ಯವನ್ನು ನೋಡಬಾರದು. ದಲಿತರು-ಕೆಳವರ್ಗದವರು-ಕೂಲಿ ಕಾರ್ಮಿಕ ರೈತರ ಮಕ್ಕಳು ಮೊಟ್ಟಮೊದಲಬಾರಿಗೆ ಒಂದೇ ವೇದಿಕೆಯಲ್ಲಿ ಸಂಘಟಿತರಾಗಿ ನೊಂದ ಜನತೆಯ ದನಿಯಾಗಿ-ಮಾತಾಗಿ-ಹಾಡಾಗಿ ಬಂಡಾಯ ಸಾಹಿತ್ಯ ಚಳವಳಿಯಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ತಾನು ಸೃಷ್ಟಿಸುವ ಸಾಹಿತ್ಯದಿಂದಲೇ ಸಮಾಜದಲ್ಲಿ ಕ್ರಾಂತಿಯಾಗುತ್ತದೆಂಬ ಹುಚ್ಚು ಭ್ರಮೆ ಬಂಡಾಯ ಸಾಹಿತಿಗಿಲ್ಲ. ಆದರೆ ಬಂಡಾಯ ಸಾಹಿತಿಯಿಂದ ಸೃಷ್ಟಿಯಾದ ಸಾಹಿತ್ಯದಲ್ಲಿ ಸಾಂಸ್ಕೃತಿಕ ಬದಲಾವಣೆ ತರುವ ದೊಡ್ಡ ಪ್ರಯತ್ನವಿದೆ.

ಜಿಡ್ಡುಗಟ್ಟಿರುವ ಸಾಂಸ್ಕೃತಿಕ ಕ್ಷೇತ್ರವನ್ನು ಹೊಸ ದಿಕ್ಕುಗಳಲ್ಲಿ ಬದಲಾಯಿಸುವುದೇ ನಿಜವಾದ ಕ್ರಾಂತಿಗೆ ಪೂರ್ವಸಿದ್ಧತೆಯಾಗಿ ಮಾಡಬೇಕಾದ ಮೊದಲ ಕಾರ್ಯ. ಈ ಕಾರ್ಯವನ್ನು ತನ್ನ ಸಾಹಿತ್ಯ ಮಾಡುತ್ತದೆಂಬ ಆಶಾಭಾವನೆಯನ್ನು ಬಂಡಾಯ ಸಾಹಿತಿ ಹೊಂದಿದ್ದಾನೆ.

ಬಂಡಾಯ ಸಾಹಿತಿಗಳು ಮಾನವತಾವಾದಿಗಳು. ಬಂಡಾಯ ಸಾಹಿತಿಯ ಮಾನವೀಯತೆ, ಶೋಷಣಾರಹಿತ ಸಮಾಜಕ್ಕೆ ತುಡಿಯುವ ಮಾನವೀಯತೆ. ಅವರ ಮುಖ್ಯ ಕಾಳಜಿಯಿರುವುದು ಮುಖವಿಲ್ಲದ-ಶತಮಾನಗಳಿಂದ ವಂಚಿತನಾದ ಜನಸಾಮಾನ್ಯನ ಕಡೆ. ಬಂಡಾಯ ಸಾಹಿತಿಯ ಮಾನವೀಯತೆ ಮುಗಿಲುಮುಟ್ಟುವ ಮಹಡಿಗಳ ಕಡೆಗಿರದೆ, ಮುರುಕು ಗುಡಿಸಲುಗಳ ಕಡೆಗಿದೆ.

ಬಂಡಾಯ ಸಾಹಿತ್ಯದಲ್ಲಿ ಬರೀ ಪ್ರತಿಭಟನೆ-ರೊಚ್ಚು-ಆವೇಶ ಇರಬೇಕೆಂದೇನೂ ಅಲ್ಲ. ವ್ಯವಸ್ಥೆ ಬದಲಾವಣೆಗಾಗಿ ಹಾತೊರೆಯುವ ಯಾವುದೇ ತಣ್ಣನೆಯ ವಿಚಾರ ಕೂಡಾ ಬಂಡಾಯ ಸಾಹಿತ್ಯವಾಗಬಲ್ಲದು. ಹಾಗೆಂದಾಕ್ಷಣ ಬಂಡಾಯ

ಸಾಹಿತ್ಯ ಕಲಾತ್ಮಕತೆಯನ್ನು ಕಳಚಿಕೊಂಡ ಶುಷ್ಕ ಒಣ ವರದಿಯಲ್ಲ. ಕಲಾತ್ಮಕತೆಯನ್ನು ಗರ್ಭೀಕರಿಸಿಕೊಂಡೇ ಬಂಡಾಯ ಸಾಹಿತ್ಯ ಹುಟ್ಟುತ್ತದೆ. ಆದರೆ ಕಲೆಗಾಗಿ–ಕಲೆ ಎಂಬ ಸಿದ್ಧಶೈಲಿಯೇ ಬಂಡಾಯ ಸಾಹಿತಿಯ ಚೌಕಟ್ಟಲ್ಲ.

ಬಂಡಾಯ ಸಾಹಿತ್ಯವೆಂದರೆ ಪ್ರತಿ ಕೃತಿಯೂ ಪ್ರತಿಭಟನೆಯೊಂದಿಗೆ ಮುಕ್ತಾಯವಾಗಬೇಕೆಂದೇನೂ ಅಲ್ಲ. ಒಂದು ಕೃತಿಯಲ್ಲಿ ವ್ಯಂಗ್ಯ ಮೊನಚಾಗಿರಬಹುದು. ಮತ್ತೊಂದರಲ್ಲಿ ಧ್ವನಿ ಆ ಕೆಲಸ ಮಾಡಿರಬಹುದು, ಇನ್ನೊಂದರಲ್ಲಿ ಕ್ರೂರ ವ್ಯವಸ್ಥೆಯ ಕರಾಳ ಮುಖಗಳನ್ನು ತಣ್ಣನೆಯ ಭಾವದಲ್ಲಿ ದಾಖಲಿಸಿರಬಹುದು.

ಇಲ್ಲಿಯವರೆಗೆ ಹೆಣ್ಣನ್ನು ದೇವತೆಯನ್ನಾಗಿ ಇಲ್ಲವೆ ರಾಕ್ಷಸಿಯನ್ನಾಗಿ ಕಂಡಿದ್ದಾರೆಯೇ ವಿನಃ. ಹೆಣ್ಣನ್ನು ಹೆಣ್ಣಾಗಿ ಕಾಣುವುದರ ಮುಖಾಂತರ ಹೆಣ್ಣಿನ ನೈಜ ಆಶೆ–ಆಕಾಂಕ್ಷೆಗಳನ್ನು ಅವಳ ಬದುಕಿನಲ್ಲಿ ಪಲ್ಲವಿಸಿದವರು ಬಹಳ ಕಡಿಮೆ. ಬಂಡಾಯ ಸಾಹಿತಿ ಹೆಣ್ಣನ್ನು 'ತ್ಯಾಗ' ಎಂಬ ಹೆಸರಿನಿಂದ ವಂಚಿಸದೆ, ಹೆಣ್ಣನ್ನು ಹೆಣ್ಣನ್ನಾಗಿ ಕಾಣುತ್ತಾ ಅವಳ ಸಹಜ ಆಶೆ–ಆಕಾಂಕ್ಷೆಗಳಿಗೆ ಶತಮಾನಗಳಿಂದ ವಂಚಿತಳಾದ ಆಕೆಯ ನೋವು–ನಲಿವಿನ ಬದುಕಿಗೆ ಜೀವ ತುಂಬುತ್ತಾನೆ, ತನ್ನಂತೆ ಸಮಾನತೆಯಿಂದ ಕಾಣುತ್ತಾನೆ.

ಬಂಡಾಯ ಸಾಹಿತಿಗಳಿಗೆ ಸೌಂದರ್ಯಪ್ರಜ್ಞೆಯೇ ಇಲ್ಲವೆನ್ನುವ ಮಾತುಗಳಲ್ಲಿ ಹುರುಳಿಲ್ಲ. ಬಂಡಾಯ ಸಾಹಿತಿ ಕಾಣುವ ಸೌಂದರ್ಯ ಕೇವಲ ಮೇಲುನೋಟದ ಥಳಕು–ಬೆಳಕಲ್ಲ, ಮಾನವೀಯತೆಯನ್ನು ಸ್ಫುರಿಸುವ ಅಂತರಂಗದ್ದು. ಬಂಡಾಯ ಕವಿಗೆ ನಿಸರ್ಗದ ಮೇಲೆ ಕೋಪವಿಲ್ಲ. ಆದರೆ ಆತ ಅದನ್ನೇ ಆರಾಧ್ಯ ದೈವವೆಂದು ನಂಬಿ ಕೈಕಟ್ಟಿ ಕೂಡುವುದಿಲ್ಲ. ಪ್ರಕೃತಿ ಬಗ್ಗೆ ಬಂಡಾಯ ಸಾಹಿತಿಗಿರುವಷ್ಟು ಕಾಳಜಿ, ಆತ ಪ್ರಕೃತಿಯನ್ನು ನೋಡುವ ಹೊಸ ದೃಷ್ಟಿಕೋನ ಇನ್ನುಳಿದ ಸಾಹಿತಿಗಳಲ್ಲಿ ಕಾಣದು.

ಹೂವು–ಹೆಣ್ಣು–ತಾರೆಯ ಬಗೆಗೆ ಕವಿ ಚಂದ್ರಶೇಖರ ಪಾಟೀಲರ ಕವನದ ಈ ಕೆಳಗಿನ ಸಾಲುಗಳು ಪ್ರಕೃತಿಯ ಬಗೆಗೆ ಬಂಡಾಯ ಕವಿಗಿರುವ ನಿಲುವನ್ನು ಸ್ಪಷ್ಟಪಡಿಸುತ್ತವೆ.

'ನೆಲದ ಬಸಿರಿನ ಬಿಸಿಗೆ
ಬಿರಿತು ಒಡಲನೆ ಸೀಳಿ
ಹೊರಬಂದ ಜೀವರಸ
ಟೊಂಗೆ–ಟೊಂಗೆಯ ತುದಿಗೆ
ಕಾರಂಜಿಯಾಗಿ ಅರಳುವ ಹೂವು.

ಕಾಯಾಗಿ ಹಣ್ಣಾಗಿ ಮತ್ತೆ ಬೀಜವಾಗಿ
ನೂರು ಹೂವಿಗೆ ಉಸಿರು ಕೊಡುವ ಹೂವು
ಒಡಲ ನೆತ್ತರವನ್ನು ಕಣ್ಣಲ್ಲಿ ಚಿಮುಕಿಸಿ
ಹೀಗೇ ಬದುಕಬೇಕು ನಾವು–ನೀವು' (ಸಂಕಲನ–'ಹೂವು ಹೆಣ್ಣು ತಾರೆ')

ಎನ್ನುತ್ತಾ ಹೂವು ಹೆಣ್ಣು ತಾರೆಯ ಬಗೆಗೆ ಹಾಡುವುದು ಬೇಡವೆಂದು ಹೇಳುವುದು ಬೇಡ ಗೆಳೆಯ ಎನ್ನುತ್ತಾರೆ. ಇದೇ ಹೂವಿನ ಮೂಲಕ ಈ ನೆಲದ ಬದುಕನ್ನು ನೆನಪಿಸುತ್ತಿರುವ ಕುಂ. ವೀರಭದ್ರಪ್ಪನವರ ಈ ಕೆಳಗಿನ ಕವಿತೆಯ ಸಾಲುಗಳು ಗಮನಾರ್ಹವಾಗಿವೆ.

'ಮುಡಿಯಿರಿ ಒಂದು ಹಿಡಿ ಹೂವ
ಮರೆಯಿರಿ ಒಂದು ಮಣ ನೋವ
ಕಾಡುಕಣಿಗಿಲೆ ಮಾತು ಹಾಡು ಗುನುಗುವ ಮೊದಲೆ
ಕಿವಿಗೊಡಿರಿ ಈ ನೆಲದ ಹೃದಯಸ್ಪಂದನಕೆ
ಹಕ್ಕಿ ಕಂಠದಿ ಅಡಗಿ ಉಕ್ಕೊ ಕಲರವದಲ್ಲಿ
ವೈಮರೆಯದಿರಿ ಸ್ವಾಮಿ ನೋಡಿ ಎಡಕೆ ಬಲಕೆ' (ಕವಿತೆ–'ಅನಿವಾರ್ಯ')

ಶೋಷಿತ ಜನರ ನೋವನ್ನು ವಿವರಿಸಲು ಅಕ್ಷರಗಳೇ ಸಾಲವು ಎಂಬ ಡಾ॥ ಚೆನ್ನಣ್ಣ ವಾಲೀಕಾರರ ಈ ಕೆಳಗಿನ ಕವಿತೆಯ ಸಾಲುಗಳು ತಣ್ಣನೆಯ ಭಾವದಲ್ಲೇ ಧಿಮಿಗುಡುತ್ತ ದಟ್ಟ ಸತ್ಯವನ್ನು ಸಾರುತ್ತವೆ.

'ಯಾವ ಅಕ್ಷರದಿಂದ ಬರೆದು ಹೇಳಲಿ ನಾನು
ನಮ್ಮ ಜನರಿಗಾದ ಎದೆಯ ಬ್ಯಾನಿ
ಕಾಲಕಾಲದಿಂದ ದುಡ್ಡು ಅಧಿಕಾರದಿಂದ
ಅವರೇ ಲೀಡರ್ ಆಗಿ ಮೆರೆಯುತ್ತಿರಲು....'
(ಸಂಕಲನ–'ಪ್ಯಾಂಥರ ಪದ್ಯಗಳು')

ನಮ್ಮ ದೇಶಕ್ಕೆ ಬಂದಿರುವ ಸ್ವಾತಂತ್ರ್ಯ ಯಾರಿಗೆ ಬಂತು? ಎಂದು ಕೇಳುವ ಸಿದ್ಧಲಿಂಗಯ್ಯನವರ ನುಡಿಗಳಲ್ಲಿ ನೇರ ವಿಡಂಬನೆಯಿದೆ, ದಟ್ಟ ಸತ್ಯವಿದೆ. ಕಲಾತ್ಮಕತೆಯನ್ನು ಮೀರಿ ಉರಿವ ಶತಮಾನಗಳ ನೋವಿನ ಕೆಂಡವಿದೆ.

'ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಟಾಟಾಬಿರ್ಲಾರ ಜೇಬಿಗೆ ಬಂತು
ಜನಗಳ ತಿನ್ನುವ ಬಾಯಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ.
ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ
ಗೋಳಿನ ಕಡಲನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ' (ಸಂಕಲನ–'ಕಪ್ಪುಕಾಡಿನ ಹಾಡು')

ಭಗವದ್ಗೀತೆಯ ಬಗೆಗೆ ಅಲ್ಲಮಪ್ರಭು ಬೆಟ್ಟದೂರ ಅವರಿಗೆ ಇರುವ ಪ್ರೀತಿಯೆಂತಹದೆಂಬುದನ್ನು ಅವರ ಕವಿತೆಯ ಈ ಕೆಳಗಿನ ಸಾಲುಗಳು ಸಾಬೀತುಪಡಿಸುತ್ತವೆ.

'ಗೀತೆ ಈ ನೆಲದ ತುಂಬಾ ಹೇತೆ
ಆಧ್ಯಾತ್ಮದ ಸೋಗಲಾಡಿತನ.
ಕಾರಿಕೊಂಡೆ ಅಪಕ್ವ ಪೂರ್ವಾಪರ ವಿರುದ್ಧ ವಿಚಾರಗಳನ್ನ.
ಈ ಬದುಕನ್ನಪ್ಪದೆ, ಇದೇ ಜನ್ಮವನ್ನಪ್ಪದೆ
ಮುಂದಿನ ಜನ್ಮದ ಆಶಾ ತೋರಿಸಿ ಕುತಿಗಿ ಯ್ಯುತಿದ್ಯಾಗೀತೆ
ದುಡಿದದ್ದಕ್ಕೆ ಪ್ರತಿಫಲವನ್ನೇ ಕೇಳಬಾರದೆನ್ನುತ್ತೀಯಾ ಗೀತೆ'

(ಸಂಕಲನ–'ಇದು ನನ್ನ ಭಾರತ')

ಪೆಟ್ರೋಮ್ಯಾಕ್ಸ್ ಹೊತ್ತ ಕೂರುವರು ಉಳ್ಳವರ ಸಂಭ್ರಮಗಳಿಗೆ ಬೆಳಕು ಕೊಡುತ್ತ ತಾವು ಕತ್ತಲೆಯಲ್ಲಿ ಹೂತು ಹೋಗುತ್ತಿದ್ದಾರೆ. ಈ ದಾರುಣ ಚಿತ್ರವನ್ನು ಜಂಬಣ್ಣ ಅಮರಚಿಂತರು ಹೀಗೆ ನೋಡಿದ್ದಾರೆ.

'ಇದ್ದವರು ಕದ್ದವರು
ಚುನಾವಣೆ ಗೆದ್ದವರು
ಇವರು ಹೊತ್ತ ಬೆಳಕಿನಲ್ಲಿ
ಲಕಲಕ ಹೊಳೆದರು !
ಯಾರಯ್ಯಾ; ಯಾರಿವರು ?
ಕಣ್ಣಿಗಂತೂ ಕಾಣರು
ಪೆಟ್ರೋಮ್ಯಾಕ್ಸ್ ಹೊತ್ತವರು.....'

('ಪೆಟ್ರೋಮ್ಯಾಕ್ಸ್ ಹೊತ್ತವರು'–ಕವಿತೆ)

ಇಂಡಿಯಾದಲ್ಲಿ ಎಲ್ಲದಕ್ಕೂ ಬರ ಬರಬಹುದು. ಆದರೆ ಸ್ವಾಮಿ–ಸಂತ-ಬಾಬಾರಿಗೆ ಎಂದಿಗೂ ಬರ ಬರಲಾರದು. ವಿವಿಧ ಭಂಗಿಗಳಲ್ಲಿ ಕುಣಿಯುವ ಈ ಕಾವಿ ಮಹಾಶಯರನ್ನು ಬಿ. ಟಿ. ಲಲಿತಾನಾಯಕರು ತಮ್ಮ ಕವಿತೆಯೊಂದರಲ್ಲಿ ಹೀಗೆ ಕಂಡಿದ್ದಾರೆ.

'ಎತ್ತ ನೋಡಿದರತ್ತ ಸಾಧುಸಂತ ಸ್ವಾಮಿ ಬಾಬ
ಹರಿ ಹರ ಅಲ್ಲಾ ಏಸು
ಏಸೋ ಭಾವಭಂಗಿಯ ಮಂದಸ್ಮಿತ ಮೋರೆಗಳು
ಚಾಚಿರುವ ಅಭಯ ಹಸ್ತಗಳು....
ಎತ್ತ ನೋಡಿದರತ್ತ
ಮುಖವಾಡಗಳೇ ಮುಖವಾಡಗಳು'

('ಏಸೋ ಭಾವಭಂಗಿಯ ಮೋರೆಗಳು'–ಕವಿತೆ)

'ಇಹ'ದ ಬದುಕನ್ನು ಅಲ್ಲಗಳೆದು 'ಪರ'ದ ಹೆಸರಿನಲ್ಲಿ ಮೋಸ ಮಾಡುತ್ತಾ ಮೆರೆಯುವ ಇದೇ ಸ್ವಾಮಿ–ರಾಯರನ್ನು ಕುರಿತು ಡಾ॥ ಬಸವರಾಜ ಸಬರದರ ಒಂದು ಕವನ ಹೀಗಿದೆ....

'ಬೂದಿ ಭಸ್ಮವ ಕೊಟ್ಟು, ಸಮ್ಮ ಜನತೆಯು ಸುಟ್ಟು
ಜಪ ತಪವ ಮಾಡಿಸುತ, ಮಂತ್ರಗಳ ಪಠಿಸುತ
ಸಂಪ್ರದಾಯದ ಸ್ಮಶಾನದಿ ಗೋರಿ ಮಾಡಿದಿರಿ ಬದುಕ.
ಸಾಕಿನ್ನು ಸಾಕಿನ್ನು ಪಲ್ಲಕ್ಕಿ ಗುರುಗಳೆ !
ಸಾಕು ಸಾಕಯ್ಯಾ ಪಂಚ ಪೀಠಾಧಿಪರೆ !
ಇನ್ನಾದರೂ ನೋಡಿ ಕಾಷಿನಾ ಸ್ವಾಮಿಗಳೆ !
ಬೆಳಗಾಗಿದೆದ್ದೇಳಿ ಗುರುವಾರದ ರಾಯರೆ !
ಏನು ಮಾಡುವಿರಯ್ಯಾ ಸಂಸಾರವ ಬಿಟ್ಟು
ಏಕೆ ಹಾರುವಿರಯ್ಯಾ ಕ್ಯಾವಿಯಾ ತೊಟ್ಟು.'

(ಸಂಕಲನ–'ಮೂಡಲಕ ಕೆಂಪ ಮೂಡ್ಯಾವ')

ಹೀಗೆ ಸಮಾಜ–ನಿಸರ್ಗ–ಪ್ರಸ್ತುತ ಬದುಕನ್ನು ಕುರಿತ ಬಂಡಾಯ ಕವಿಗಳ ಮನೋಧರ್ಮವನ್ನು ಅವರ ಆಯ್ದ ಕವಿತೆಗಳ ಸಾಲುಗಳ ಮುಖಾಂತರ ಸಂಕ್ಷಿಪ್ತವಾಗಿ ವಿವರಿಸಿದೆ. ಇವರಷ್ಟೇ ಅಲ್ಲದೆ ಕಾಳೇಗೌಡ ನಾಗವಾರ, ರಾಮದೇವ ರಾಕೆ, ಮುನಿವೆಂಕಟಪ್ಪ, ಸುಕನ್ಯಾ ಮಾರುತಿ. ಎಸ್. ಎಸ್. ಹಿರೇಮಠ, ಡಿ. ವಿಜಯ, ಗುಡಿಹಳ್ಳಿ ನಾಗರಾಜ, ಜಿ. ಎಚ್. ರಾಘವೇಂದ್ರ, ಚಂದ್ರಶೇಖರ ತಾಳ್ಯ, ಇಂದೂಧರ ಹೊನ್ನಾಪುರ, ಮಂಗ್ಳೂರವಿಜಯ, ವಿಜಯ ಪಾಟೀಲ, ಕೆ. ರಾಮಯ್ಯ, ಕೆ. ಶರೀಫಾ, ಸತೀಶ ಕುಲಕರ್ಣಿ, ಗವಿಸಿದ್ದ ಬಳ್ಳಾರಿ, ಆರ್. ಜಿ. ಹಳ್ಳಿ ನಾಗರಾಜ್— ಈ ಮೊದಲಾದವರೆಲ್ಲಾ ಈಗಾಗಲೇ ಬಂಡಾಯ ಕಾವ್ಯದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಕಥೆ–ಕಾದಂಬರಿ–ವಿಮರ್ಶಾ ಕ್ಷೇತ್ರದಲ್ಲಿ ಬರಗೂರು ರಾಮಚಂದ್ರಪ್ಪ, ದೇವನೂರ ಮಹಾದೇವ, ಡಾ॥ ಆರ್ಕೆ ಮಣಿಪಾಲ, ಡಾ ಬೆಸಗರಹಳ್ಳಿ ರಾಮಣ್ಣ, ಡಾ॥ ಬಿ. ಕೃಷ್ಣಮೂರ್ತಿ, ಎಸ್. ಗಣೇಶನ್, ಕೆ. ಎಸ್. ಭಗವಾನ್, ಶಿವರಾಮು ಕಾಡನಕುಪ್ಪೆ—ಈ ಮುಂತಾದವರು ಗಟ್ಟಿಯಾಗಿ ನೆಲೆಯೂರಿದ್ದಾರೆ. ಕಥೆ–ಕಾದಂಬರಿಗಳಲ್ಲಿ ವಿಶಿಷ್ಟ ದನಿ ಮೂಡಿಸಿ, ವಿಮರ್ಶಾ ಕ್ಷೇತ್ರದಲ್ಲಿ ಹೊಸ ಆಯಾಮಗಳನ್ನು ಕಲ್ಪಿಸಿದ್ದಾರೆ. ಈ ಸಂದರ್ಭದಲ್ಲಿ ನೆನಪಿಸಲೇಕಾದ ಬಂಡಾಯದ ಇನ್ನೊಂದು ಪ್ರಮುಖ ಹೆಸರು ದಿ. ದೇವಯ್ಯ ಹರವೆ. ಬಂಡಾಯ ಸಂಘಟನೆಯಲ್ಲಿರದ ಬಂಡಾಯ ಮನೋಧರ್ಮವನ್ನು ಪ್ರಕಟಿಸಿರುವ ಹಲವಾರು ಯುವ ಲೇಖಕ–ಲೇಖಕಿಯರಿದ್ದಾರೆ.

ಸ್ಥಗಿತಗೊಳ್ಳುತ್ತಿದ್ದ ಕನ್ನಡ ಸಾಹಿತ್ಯದಲ್ಲಿ ಹೊಸ ತಿರುವು ಮೂಡಿಸಿದ ಬಂಡಾಯ ಸಾಹಿತ್ಯ ಈ ಸಂದರ್ಭದ ಜರೂರಿಯಿಂದ ಹುಟ್ಟಿದುದೆಂಬುದನ್ನು ಈಗಾಗಲೇ ಚರಿತ್ರೆಯಲ್ಲಿ ದಾಖಲುಗೊಳಿಸಿದೆ. ಕೆಲವು ಪ್ರಮುಖ ನವೋದಯ–ನವ್ಯ ಸಾಹಿತಿಗಳು ತಮಗೆ ತಿಳಿಯದಂತೆಯೇ ಈಗ ಬಂಡಾಯದ ಕಡೆ ವಾಲುತ್ತಿದ್ದಾರೆ. ರಚನಾತ್ಮಕ ಟೀಕೆಗಳಿಗೆ ಬಂಡಾಯ ಸಾಹಿತಿಗಳಲ್ಲಿ ಸದಾ ಸ್ವಾಗತವಿದೆ. ಮುಕ್ತ ಚರ್ಚೆಯೊಂದಿಗೆ ಜನಪರ ನಿಲುವುಗಳನ್ನು ಸಮರ್ಥಿಸುತ್ತಾ, ಸಾಂಸ್ಕೃತಿಕ ಹೋರಾಟದಲ್ಲಿ ತೊಡಗುವದೇ ಬಂಡಾಯ ಸಾಹಿತ್ಯದ ಗುರಿ.

# ಮನವಿ

ಒಡೆದ ಕರಿ ಮಡಕೆಗಳ
ಬಿರುಕು ಬಿರುಕುಗಳಲ್ಲಿ
ಸಿಕ್ಕಿ ನರಳಾಡುತಿದೆ ನೆಲದ ಹೊಂಗನಸು
ಹೊಗೆಯು ಕಡಲಿನ ಮೇಲೆ ಬಿಳಿಬಿಳಿಯು ಹಡಗುಗಳು
ಅದರೊಳಗೆ ರಾಣಿಯು ಗೊರಕೆ ಹಾಡು.

ಜೂಲಾದ ಅರಿವೆಗಳ
ಸೀಳು ಕಿಂಡಿಗಳಲ್ಲಿ–
ಇಂಡಿಯಾ ಅಳುತಿದೆ ಉಸಿರು ಕಟ್ಟಿ
ಉರಿವ ನದಿಗಳ ಮೇಲೆ ಮುಖ ಸುಟ್ಟ ಕಮಲಗಳು
ರಾಜಾಧಿರಾಜರಿಗೆ ಕುಣಿವ ಅಮಲು.

ಉರಿವ ನದಿಗಳ ಮೇಲೆ ಹಾಲಿನ ಮಳೆ ಸುರಿಸು
ನಿನ್ನೆದೆಯ ಬಾನಿನಲಿ ಮೋಡಗಳ ತರಿಸಿ
ರಾಣಿಯು ಹಾಡಿಗೆ ರಾಜರು ಮರುಳಾಗಿ
ಪ್ರಜ್ಞೆ ಮರೆತು ಕುಣಿದಾಡೋ ಅವಧಿ ಮುಗಿಸು.

ಬಾರಯ್ಯ ಬಾರೋ
ನಾಡ ಮಣ್ಣಿನ ಗೆಳೆಯ
ಮೋಡಗಳ ಎದೆಯೊಡನೆ ಬೇಗ ಬಾರೋ
ನನ್ನ ಹಾಡುಗಳ ಕತ್ತಿ ಉಡುಗೊರೆ ಕೊಡುವೆ
ಸುಖ ಶಾಂತಿ ಮಳೆ ಬೇಕು
ನೀನು ತಾರೋ
ನಾಡ ಮಣ್ಣಿನ ಗೆಳೆಯ ಬೇಗ ಬಾರೋ.

—ರಾ. ಮೂರ್ತಿ

ದಿ. 31–10–1984

(ಬದುಕಿರುವವರೆಗೆ ಸರ್ವಾಧಿಕಾರಿಣಿಯೆಂದೇ ಹೆಸರಾಗಿದ್ದ ಪ್ರಧಾನಿ ಇಂದಿರಾ ಗುಂಡಿಗೆ ಆಹುತಿಯಾದ ಬೆಳಗ್ಗೆಯಷ್ಟೇ ನಮ್ಮ ಪತ್ರಿಕೆಯ ಸಹ ಸಂಪಾದಕ ರಾ. ಮೂರ್ತಿ ಬರೆದ ಕವನವಿದು)

# ಹಂತ

ದಲಿತ ಬುಡ್ಡೀನ ಮಗ ಸೋಮಯ್ಯ
ಕಾಲೇಜು ವಿದ್ಯೆ ಕಲ್ತು
ಹೊಳ್ಳಿ ಬಂದ ಮ್ಯಾಲೆ
'ನಮ್ಮಂದಿಯುನ್ನ ರಾಮ್ದೇವ್ರ ಗುಡಿಯೊಳಗ
ಯಾದಕ್ಕ ಬಿಡೋವಲ್ರ್ಯ'ಂತ ತಕರಾರು ಹಚ್ಚಿ
ಊರೊಳಗ ಉಪವಾಸ ಕುಂತು
ಚಳವಳಿ ಸುರು ಮಾಡ್ದಾಗ.
ಬುಡ್ಡೀರ್ರೂ ಆತನ ನೆರೆಕೆರೆಯೋರು
ಸೋಮಣ್ಣನ ಮಾತಿಗೆ ಸಪೋರ್ಟು ಕೊಟ್ರು.
'ಹೌದ್ರಲೇ ಮಕ್ಕಳ್ರಾ.
ನಮಗ್ಯಾಕ ಗುಡಿಯಾಗ ಪ್ರವೇಶಿಲ್ಲ?
ನಾವೂ ನಿಮ್ಮಂಗ ಮನ್ಸಾರಲ್ಲಾ?'
ಅಂತ ರೊಚ್ಚಿಗೆದ್ದು ಕೂಗಿ ಕೇಳ್ದಾಗ
ಅಂಜೋರನ್ನ ಕಂಡು ಅಂಜಿಸ್ತಿದ್ದ ಮಂದಿ
ಈಗ ಖರೇವಂದ್ರ ತಾವೇ ಅಂಜಿ
ದಾರಿಯಿಂದ ದೂರ ಸರಿದು ನಿಂತ್ರು!
ದಲಿತ್ರನ್ನೆಲ್ಲ ಜೊತೆಗೆ ಕರ್ಕೊಂಡು
ಮಗ–ಸೋಮಯ್ಯ
ಅಪ್ಪ–ಬುಡ್ಡೀರ
ರಾಮ್ದೇವ್ರ ಗುಡಿ ಒಳಗ ಹೊಕ್ರು.
ತೆಂಗಿನಕಾಯಿ ಒಡ್ಸಿ
ತಿಳಿನೀರ ತೀರ್ಥ ಕುಡುದ್ರು.
ಭಗತಿಯಿಂದ ಕಾಣಿಕೆ ಹಾಕಿ
ಬಿಸಿಬಿಸಿ ಮಂಗ್ಳಾರ್ತಿ
ಕಣ್ಣಿಗ ಒತ್ತಿಕೊಂಡ್ರು.
'ರಾಮ್ರಾಮಾ, ನಮ್ಮನ್ನ ಕಾಪಾಡಪ್ಪ
ಹೆಂಡ್ರು ಮಕ್ಳು ಅಡವಿ ಪಾಲಾಗಧಂಗ
ಅವರಿವರ ಚಾಡಿ ಮಾತಿಂದ ನಮ್ಮ

ತಲಿ ಕೆಡಲಾರಧಂಗ
ಜ್ವಾಕಿ ಮಾಡು ನಮಪ್ಪೇ' ಅಂತ
ಕೈ ಮುಕ್ಕೊಂತ ಹೊರಕ್ಕ ಬಂದ್ರು.
'ಕಡೆಗೂ ದರುಸ್ನ ಕೊಟ್ಟ–ನಮ್ಮಪ್ಪ ರಾಮಪ್ಪ !'
ಅಂತ ಬುಡ್ಡೀರ್ರೂ ಆತನ ಗೆಳೇರೂ
ನೆಗಾಡ್ತಾ, ಕೂಗಾಡ್ತಾ, ಖುಶೀಲಿರುವಾಗ
ಸೋಮಯ್ಯ ಇದ್ದಕ್ಕಿದ್ದಂಗೇ
ತಲೀಗೆ ಕೈ ಹಚ್ಚಿ ಮೂಲ್ಯಾಗ ಕುಂತ್ಬಿಟ್ಟ !
'ಯದಕ್ಲಾ ಮಗ ಏನಾತ್ಲಾ ?'
ಅಂತ ಬುಡ್ಡೀರ ಕೇಳ್ದಾಗ
'ಯಪ್ಪಾ, ಗುಡಿಯಾಗ ಇರೋದು
ಖರೇ ರಾಮ್ದೇವ್ರಾ ?'
ಅಂತ ಚಿಂತಿಯಿಂದ ಪ್ರಶ್ನೆ ಮಾಡ್ದ ಸೋಮಯ್ಯ.
ಕುಣ್ದು ಕುಪ್ಪಳಿಸ್ತಿದ್ದ ಮಂದಿ
ಚಣ ಹೊತ್ತು ಗಪ್‌ಚಿಪ್ ಕುಂತ್ರು.
ತಲಿ ತಲಿ ಕೆರಕೊಂಡು
ತಂತಮ್ಮೊಳಗs ಕೇಳಾಕ
ಸುರು ಮಾಡಿದ್ರು–
'ಹೌದಲ್ಲಾ ! ಗುಡಿಯಾಗ ಇರೋದು
ರಾಮ್ದೇವ್ರೋ ?
ಪೂಜಾರೀನೋ ??'

—ಬಿ. ಟಿ. ಲಲಿತಾ ನಾಯಕ

● ●

## ನಿಂತ ನೀರು

ನಿಂತ ನೀರ್ನಾಗ ನಿಂತಕೊಂಡ್ರ
ಕೊಳಿತದಾ ಮನ
ಆಗ್ತೀವಿ ಸೊಳ್ಳಿ;
ಕಡಿತೀವಿ ಕಂಡ ಕಂಡವ್ರಿಗೆ.

—ಸಂಜೀವ ದೇಶಪಾಂಡೆ

# ಬುಳ್ಳಪ್ಪನ ಮನೆ ಸಾಲು

ಬುಳ್ಳಪ್ಪ ಕಾಂಪ್ಲೆಕ್ಸಿನ ಹದಿನಾರು ಮನೆ ಸಾಲುಗಳು
ನನ್ನಂಥ ಬಡ ತಾಪೇದಾರನ ಗುಂಡಿಗೆಯ ಶೂಲಗಳು.
ಇಂದಿಗೂ ನನ್ನ ಜತೆ ಹತ್ತಾರು ಹೃದಯಗಳ
ತೀಡುತ್ತ ನಗುತಲಿವೆ ಬಿರಿದ ಗಾಯಗಳು.

ಬಹು ಹಿಂದೆ ನಗರಕ್ಕೆ ಬುಳ್ಳಪ್ಪ ಬಂದಾಗ-ಅಪ್ಪ ಹೇಳುವುದುಂಟು :
ಬಹಳ ಬಡವನಂತೆ.
ಹೊತ್ತು ತಂಡದ್ದೊಂದು ಚೀಲ-ಒಂದೇ ಶರಟು; ತಲೆ ತುಂಬ
ಜಗವನ್ನ ಒಳಗೊಳುವ ಮಹದಾಕಾಂಕ್ಷೆ.
ಹತ್ತುವರ್ಷದ ದುಡಿಮೆ ಏನಂಥ ಹಿರಿಮಾತು ? ಬುಳ್ಳಪ್ಪ
ನಂಥವರ ಪರಿಯೆ ಹೀಗೆ.
ನನಗಿಂದಿಗೂ ಚೋದ್ಯ-ಗಟ್ಟಿ ಮಾತಾಡಲೂ ಬಾರದ ಇಂಥವನು
ಇಷ್ಟೊಂದು ಬೆಳೆದದ್ದು ಹೇಗೆ ?
ಇಡಿಯ ಓಣಿಯ ಸುತ್ತ ಇವನದೇ ಬಾಡಿಗೆ-ನೂರು ಜನ,
ನೂರು ಮನ, ರೀತಿ, ತರಹೆ;
ಮಿನಿ ಭಾರತ ಎಂದುಬಿಡಿ ಬಡಾವಣೆ-ಹತ್ತಾರು
ಜಾತಿ ಮತ ಪರಂಪರೆ.
ಏನುಂಟು ಏನಿಲ್ಲ ಇವನ ಕಾಂಪ್ಲೆಕ್ಸಿನಲಿ-ಜವಳಿ, ಕಿರಾಣಿ, ಬ್ಯಾಲೆ
ವಿಸ್ಕಿ ಸೋಡ.
ಲಿಫ್ಟಿರದ ಎಂಟನೆಯ ಮಹಡಿ ಚಾವಣಿ ಮೇಲೆ ಬರಿಕೈಗೆ
ಎಟುಕುವುದು ಬಿಳಿಯ ಮೋಡ.
ಇವನ ಓಡಾಟಕ್ಕೆ ಎರಡುಂಟು ಹೊಸ ಕಾರು; ದಿನದ
ಗಳಿಕೆಯೆ ಎಣಿಸಲಾರದಷ್ಟು,
ಬಾಡಿಗೆ ತೆತ್ತು ಸುಸ್ತಾದಾಗ ಒಮ್ಮೊಮ್ಮೆ ನನಗೂ ರಿಯಾಯಿತಿ
ತೋರಿಸುವುದುಂಟು ಅಷ್ಟಿಷ್ಟು.
ನೂರು ಬಗೆ ಓಡಾಟ, ಹಲವು ಬಗೆ ಕೆಲಸಗಳು, ಬಿಡುವಿರದ
ಆಸಾಮಿ-ದೊಡ್ಡ ತರಹೆ.
ಎಟುಕಲಾರದೆ ತಿಣುಕುವ ನನಗೋ ಹೊಟ್ಟೆಯುರಿ, ಹುಳಿ ತೇಗು-
ಕರುಳಿನಲಿ ಹುಣ್ಣೊಂದು ವೈದ್ಯರೆಣಿಕೆ.

ಮನೆಗಳಿಲ್ಲದ ಏಸೊ ಮಂದಿ ಬದುಕುವರಿವನ ಅಂಗಳದ
ಮರಗಳಡಿ ಪ್ರಾಣ ಊರಿ;
ಬುಳ್ಳಪ್ಪ ಒಳ್ಳೆಯುವ; ಅವರನೋಡಿಸಲಾರ-ಬೆಳೆಯುತ್ತಲೇ
ಇರುವ ಎಲ್ಲೆ ಮೀರಿ.

—ಕೆ. ಎನ್. ನಾಗರಾಜ್

● ●

# ಕೃ ತ ಜ್ಞ ತೆ

ಕಣ್ಣು ತುಂಬಿದ ಎಳೆಯುರಿಗೆ
ಎದೆಯು ತುಂಬಿದ ಮನೆಯೊಡತಿಗೆ
ಉಸಿರು ತುಂಬಿದ ಗೆಳೆಯುರಿಗೆ
ಹೆಸರು ತರುವ ಕಾವ್ಯಕ್ಕೆ
ಕಲೆಗೆ
ವಂದಿಸಲಿ ಹೇಗೆ ?

ಸಾವಿರ ಸೇವೆಯ ಬಿಡದಿಯಲ್ಲಿ
ಕಾಡಿದ ಬೇಡಿದ ಲೋಕಕ್ಕೆ
ನವಿರು ಬೆವರು ತಂದ
ಬಾಂದಳಕ್ಕೆ
ಸ್ಪಂದಿಸಲಿ ಹೇಗೆ ?

ಜೋಡಿ ಕೋಗಿಲೆ ಕುಕಿಲ ಉದಯದಲ್ಲಿ
ಮುಗಿಲ ಸೀರಲಿ ಮುಖ ತೊಳೆದು
ನಾಚಿದ ನೆಲಗನ್ನಿಕೆಯು ಕಂಡು
ಸುಖಿಸದಿರಲಿ ಹೇಗೆ ?

ಕರೆಯುತ್ತವೆ ಹಾಡುಗಳು
ಹರಿಯುತ್ತವೆ ನೋಟ
ಬೆರೆಯುತ್ತವೆ ಹೂವು ದುಂಬಿಗಳು
ಮೈದುಂಬಿ
ಮರೆತುಬಿಡಲಿ ಹೇಗೆ ?

ಗುಡುಗುಗಳೆ ಸಾಕು ಮುಂದಕೆ ಹೋಗಿ
ಮಿಂಚುಗಳೆ ಕೊಂಚ ತಡೆದು ನಿಲ್ಲಿ
ನವಿಲುಗಳೆ ನಿಮ್ಮ ನರ್ತನ ನೋಡಬೇಕು
ನಾವು ಮನುಷ್ಯರಾಗಲು
ವಿಷಮ ಸಮಾಜದ ನಂಜ ನೀಗಲು
ನಿಮ್ಮ ನರ್ತನ ಬೇಕು
ದಾಹವಿಂಗಿಸಿ ಬೆಳೆಸಬಲ್ಲ ಜೀವನದಿಗಳೇ
ಹರಿದು ಬನ್ನಿ
ಮುದ್ದಿಸಿ ಮೈದಡವಿ ವಿಕಸಮ ಪೂಸಿ ಬೆಸೆಯುವ
ತಿಳಿಗಾಳಿಯೇ ಇತ್ತ ಬಾ.

ಪರ್ವತಗಳೇ ನಿಮ್ಮ ನಿಮ್ಮ ಶಿಖರಗಳ ಮುಖ ತೋರಿಸಿರಿ
ನಾವು ಮನುಷ್ಯರಾಗಲು
ಎತ್ತರಕ್ಕೆ ಏರಿಹೋಗಲು.

—ವೀಚಿ



## ಆ ಸೆ

ಅಂತರಂಗದ
ತರಂಗದಲಿ
ಪುಟಿದೇಳುವ
ಭಾವನೆ,
ಕಾಮನೆಗಳ
ಶಿಶು.

—ಹಿರಿಯೂರು ರಾಘವೇಂದ್ರ

# ಹ ಸಿ ವು

ತಿದಿ ಒತ್ತಿ ಬಿಟ್ಟು ಹೋದ
ಆಚಾರಿಯ ಪಾಳು ಕುಲುಮೆಯ
ಬೂದಿ ಗುಂಡಿಯೊಳಗೆ
ಮರಿ ಹಾಕಿದೆ ನಾಯಿ.
ನಾನು ನೋಡುತ್ತಲೇ ಇದ್ದೇನೆ :
ಮೂರು ದಿನ ತುಂಬಿದೆ
ಹೊರ ಬಂದಿಲ್ಲ ನಾಯಿ
ತನ್ನ ಮರಿಗಳ ಬಿಟ್ಟು.
ಅಸ್ಪಷ್ಟ ನೆರಳು ಸುಳಿದರೆ ಸಾಕು
ಮೈಯನ್ನೆಲ್ಲ ಕಿವಿಯಾಗಿಸಿ
ಗುರುಗುಟ್ಟುತ್ತದೆ ಕಣ್ಣು ಕೆಕ್ಕರಿಸಿ
ಹಲ್ಲು ಕಿರಿಯುತ್ತದೆ
ಗುರ್‍ರ್‍ಽ—ಎಂದು ಗರ್ಜಿಸುತ್ತದೆ
ಹಾಽಹಾಽಕಾರದ ಹಸಿವನ್ನು ಮರೆತು
ಹೌಽ ಹಾರುತ್ತದೆ
ಎದುರಾದವರ ತಿಂದುಬಿಡುವಂತೆ
ಬಾಯಿ ತೆರೆಯುತ್ತದೆ
ತನ್ನ (ಮರಿಗಳ) ರಕ್ಷಣೆಗಾಗಿ
ಯಾರನ್ನೂ ಸುಳಿಯಗೊಡದ
ಆ ನಾಯನ್ನು ದೂರ ನಿಂತು
ಕದ್ದು ನೋಡುತ್ತೇನೆ :
ತನ್ನ ಮರಿಯನ್ನು ತಾನೇ ಕೊಂದು
ತಿನ್ನುತ್ತಿದೆ ನೀಗದ ಹಸಿವಿಗಾಗಿ
ಉಳಿದವು ನಾಳಿನ ಅರಿವಿಲ್ಲದೆ
ದುಂಬಾಲು ಬಿದ್ದಿವೆ ಎದೆ ಹಾಲಿಗೆ !

—ಡಿ. ಹೊಸಳ್ಳಿ ಶಿವು

# ಯಾವುದೀ ದನಿ ?

'ಅಪ್ಪ, ಎಲ್ಲಿ ?' ಎಂದು
ಅವರುಗಳು ಕೇಳುವಾಗ
ಕರೆದು ತಾ ಅವರನ್ನು
ಊರಿನಾಚೆಗಿನ ನೀರವ ಬಯಲಿಗೆ
ಸೂರ್ಯ ಮುಳುಗುವ ಹೊತ್ತಿಗೆ
ನಾನಿರುತ್ತೇನೆ ಅಲ್ಲಿ; ನಿನ್ನ ನಿರೀಕ್ಷೆಯಲ್ಲಿ
ನೀನು ಹೇಳುವುದ ಕೇಳಲು; ಮೌನಿಯಾಗಿ.
ಕಂಪಿಸುವಂತಿದೆ ನಿನ್ನ ಮೈ
ರೊಯ್ಯನೆ ಬೀಸುವ ಗಾಳಿಗೆ
ಬಾ, ಒರಗಿಕೋ ನನ್ನ ಮೇಲೆ
ಕೊಂಚ ಹಿತವಾಗಬಹುದು
ಅರೆ ! ಮಗು ಕೂಡ ನಡುಗುತ್ತಿದೆ
ಅಪ್ಪಿಕೋ ನಿನ್ನೆದೆಗೆ ಮಗುವನ್ನು.
ಅಂದು ನಡೆದದ್ದು ನೆನೆದು ದುಃಖಿಸಬೇಡ;
ನನ್ನಂತೆ ಮೌನಿಯಾಗಬೇಡ
ನಿನ್ನೆ ಮುಳುಗಿದ ಸೂರ್ಯ
ಉದಯಿಸಲಿಲ್ಲವೇ ಇಂದು ?
ಬೆಳಗಾಗಲೇ ಬೇಕು
ನಿನಗೂ ಈ ಜಗತ್ತಿಗೂ ಒಂದು ದಿನ
ಅಲ್ಲಿನವರೆಗೆ ನೀ ಸುಮ್ಮನಿರುವುದೇಕೆ
ನಾಳೆ ಬೆಳಕಾಗುವ ಮೊದಲು
ಇಂದೇ ಅವರಿಗೆ ಹೇಳಿಬಿಡು
ಅಂದು ನಡೆದದ್ದನ್ನು—
ಬೆಳಗಾದ ನಂತರ ಬಂದೇ ಬರುತ್ತಾರೆ
ಅವರು ಸೆಟೆದ ಎದೆಯೊಂದಿಗೆ
ಹೆಮ್ಮೆ ತುಂಬಿದ ನೋಟಗಳೊಂದಿಗೆ
ಸಲ್ಲಿಸಲು ವೀರ ವಂದನೆಗಳ
ಕೆಂಪು ಹೂಗಳರಳಿದ ನನ್ನ ಸಮಾಧಿಗೆ.

—ನಾವರಸನ್

# ಮೋನಿ ಪದ್ಯಗಳು

## ಪ್ರೀತಿ

ನಿನ್ನ ಕಂಡೊಡನೆ
ತುಡಿವ ದನಿಗಳು
ಕಂಪಿಸುವ ಕಂಠಗಳು
ಬತ್ತಿಹೋಗುವ ನಾಲಿಗೆ
ಉಮರ ಖಯ್ಯಾಮನ ಸಾವಿರ
ಸಾವಿರ ಗಜಲುಗಳಿಗೆ
ರೋಮಿಯೋನ ಸುಂದರ ಶಾಯರಿಗಳಿಗೆ ಸಮ.

## ಸ್ಪಂದನ

ನಗುವ ನಿನ್ನ ಮುಖದಲ್ಲೂ
ಕಾಡುವ ನಿಟ್ಟುಸಿರುಗಳ
ಕಂಡೊಡನೆ
ಹೃದಯದ ಟೆಲಿಗ್ರಾಫ್‌ಗಳು
ಸದ್ದಿಲ್ಲದೆ ಮೂಕ.

## ಕಿರುಗುಟ್ಟುವ ಶಬ್ದಗಳು

'ನೆನಪುಗಳಿಂದ ಹೃದಯ ಭಾರವಾದಾಗ
ಮತ್ತೊಮ್ಮೆ ಜನಿಸೋಣ'
ಎಂದು ಬರೆದವಳಿಗೆ
ಕಿರುಗುಟ್ಟುವ ಮಂಚದ ಶಬ್ದಗಳ ಮಧ್ಯೆ
ಪ್ರತಿಯೊಬ್ಬನ ಅಪ್ಪುಗೆಯಲ್ಲೂ
ಮತ್ತೊಮ್ಮೆ ಜನಿಸಿದ ಕನಸು.

—ಮೋನಿ

# ಮೂವರು ಮಹಿಳಾ ಕವಿಗಳ 'ಅಜ್ಜಿ'

● ಡಾ|| ಪೋಲಂಕಿ ರಾಮಮೂರ್ತಿ

ದುಃಖ ಒಂದು ಯೋಗ—ಪ್ರೇಮದಂತೆಯೇ. ಯಾರು ಪ್ರೇಮಿಸಲಾರರೋ ಅವರು ದುಃಖಿಸಲಾರರು. ಒಂದು ವಿಶೇಷ ರೀತಿಯಲ್ಲಿ ದುಃಖ ಪ್ರೇಮದ ತಲೆ ಕೆಳಕು. ನಮಗೆ ಪ್ರೇಮ ಸಿಗದಿರಬಹುದು, ಆದರೆ ದುಃಖ ಸಿಕ್ಕಾಗ ನಾವು ಜೀವಕ್ಕೆ ಕೃತಜ್ಞರಾಗಿರಬೇಕು. "ಓ ಜೀವವೇ ನನಗೆ ಪ್ರೇಮ ಕೊಡು. ನನ್ನ ಎದೆ ತುಂಬು" ಎಂದು ನಾವು ಜೀವವನ್ನು ಕುರಿತು ಪ್ರಾರ್ಥಿಸುವುದರ ಜೊತೆಗೆ "ಓ ಜೀವವೇ, ನೀನು ನನಗೆ ಪ್ರೇಮ ಭಿಕ್ಷೆ ಕೊಡಲಾರೆಯಾಗಿದ್ದರೆ, ನನಗೆ ದುಃಖವನ್ನು ಅನುಗ್ರಹಿಸು. ನನ್ನ ಮೈತುಂಬು" ಎನ್ನುವ ಪ್ರಾರ್ಥನೆಯನ್ನೂ ಸಲ್ಲಿಸಬೇಕು. ಪ್ರೇಮದಲ್ಲಿ ಮೈಯುಕ್ಕಿ ಹರಿಯುತ್ತದೆ, ಕಣ್ಣೀರಾಗಿ, ಹಾಗೆಯೇ ಮೈದುಂಬಿ ದುಃಖವೂ ಉಕ್ಕುತ್ತದೆ, ಕಂಬನಿಯಾಗಿ. ಪ್ರೇಮ ಮತ್ತು ದುಃಖ ಎರಡೇ ಮೈದುಂಬುವ ಪೂರ್ಣ ಭಾವ ಸಂಪತ್ತುಗಳು. ದುಃಖವಿದ್ದುದರಿಂದಲೇ, ಆ ಮಹಾ ಸಂವೇದಿ ದಯೆಯಾದ: ಬುದ್ಧನಾದ.

ಫ್ರಾಸ್ಟ್ ಕವಿ ಹೇಳಿದ ಮಾತು ತುಂಬಾ ಸತ್ಯವಾದುದು: ದೂರಿನಿಂದ ರಾಜಕೀಯ ಹುಟ್ಟುತ್ತದೆ. ದುಃಖದಿಂದ ಕಾವ್ಯ ಹುಟ್ಟುತ್ತದೆ. (Politics is made of grievances, poetry, of griefs).

ನಮ್ಮ ಕನ್ನಡ ಕಾವ್ಯ ಯಥೇಚ್ಛವಾಗಿ ರಾಜಕೀಯದ್ದು: ಅತ್ಯಂತ ವಿರಳವಾಗಿ ದುಃಖದ್ದು. ನಮ್ಮ ನವ್ಯ, ನವೋದಯ, ಬಂಡಾಯ, ದಲಿತ ಕವಿಗಳಲ್ಲಿ ಅನೇಕರು ರಾಜಕೀಯಗಳು: ಕವಿಗಳು ತುಂಬಾ ಕಡಿಮೆ. ಅವರಲ್ಲನೇಕರು 'ಹೋ' ಅನ್ನುತ್ತಾರೆ, 'ಕುಯ್ಯೋ, ಮುರ್ರೋ' ಎಂದು ಗೋಳಿಡುತ್ತಾರೆ, ಊಳಿಡುತ್ತಾರೆ: ಕೆಲವೇ ಕೆಲವರು ಮಾತ್ರ, ಬೆರಳೆಣಿಕೆಗೂ ಕಡಿಮೆ ಜನ ಕರುಳು ಒಂಡುವಂತೆ ಬಿಕ್ಕುತ್ತಾರೆ—ದುಃಖದಲ್ಲಿ ತಾದಾತ್ಮರಾಗಿ ಕೇವಲ ನಿಟ್ಟುಸಿರಿನಷ್ಟೇ ಉಸುರುತ್ತಾರೆ.

೧೯೮೪ರ ಯುಗಾದಿ ಕವಿಮೇಳದಲ್ಲಿ ಆಕಾಶವಾಣಿ ಬಿತ್ತರಿಸಿದ ಕವಿಯತ್ರಿಯರ ಕವನಗಳನ್ನು ಕೇಳಿದ ನಾನು, ಆತ್ಮೀಯವಾದ ದುಃಖದ ವಿರಳತೆಯನ್ನೂ ಕಂಡುಕೊಂಡಿದ್ದೇನೆ: ಅದನ್ನು, ಆ ದುಃಖವನ್ನು ನಾನು ನಿಮ್ಮೊಂದಿಗೆ ಹಂಚಿಕೊಳ್ಳುತ್ತಿದ್ದೇನೆ.

ಹೆಣ್ಣೆಂದರೆ ದುಃಖ, ದುಃಖವೆಂದರೆ ಸೀತೆ—ಇದು ನಾವು ಬಾಯಾಡಿಸುವ ಸಾಮಾನ್ಯ ಮಾತು, ಒಂದು ಕ್ಲೀಷೆ. ಆದರೆ ಹೇಗೆ ಹೆಣ್ಣು ದುಃಖ, ಸೀತೆ, ಎನ್ನುವ ನೋವು, ನರಳು ಅಂತಹ ಹೆಣ್ಣಿನ, ಸೀತೆಯ, ಅಂತರ್ಯವನ್ನೂ ಹೊಕ್ಕಾಗ, ಫಲ

ಕಾಯ ಪ್ರವೇಶಿಸಿ ಸ್ವಕಾಯವಾಗಿ ಮೈಗೂಡಿಸಿಕೊಂಡಾಗ ಮಾತ್ರ ಅವು ಜೀವಂತವಾಗಿ ಸ್ಪಂದಿಸುತ್ತದೆ, ನಿಜವಾಗುತ್ತದೆ—ನಮ್ಮನ್ನು ಒಳಗೊಳ್ಳುತ್ತದೆ.

ಡಿ. ವಿಜಯ ಮತ್ತು ಚ. ಸರ್ವಮಂಗಳಾ ಇವರುಗಳ ಮೂರು ಕವನಗಳನ್ನು ನಾನಿಲ್ಲಿ ಓದುತ್ತಿದ್ದೇನೆ. ಆ ಮೂರು ಕವನಗಳಲ್ಲಿ "ಅಜ್ಜಿ" ಇದ್ದಾಳೆ—ಮುದುಕಿಯಾದ ಹೆಣ್ಣಿದ್ದಾಳೆ: "ಅಜ್ಜಿ" ಮೂಲರೂಪ (archetype) ಆಗಿದ್ದಾಳೆ.

ಡಿ. ವಿಜಯ ಅವರ 'ಸ್ಪಂಜು' ಕವನದಲ್ಲಿ; ಸ್ಪಂಜು ಹೆಣ್ಣಿಗೆ ಪ್ರತೀಕವಾಗಿ ನಿಲ್ಲುವ ಅನಂತ ಭಾವಗಳನ್ನು ವ್ಯಂಜಿಸುವ ಅರ್ಥ ಸಂಪತ್ತಿನ ಹೊಚ್ಚ ಹೊಸ ಪ್ರತಿಮೆ—ಒರಿಜನ್ ಆದ ಸೃಷ್ಟಿ ಸ್ವಂತಿಕೆಯ ರೂಪಕ.

ಮೆತ್ತೊಮೆತ್ತಗೆ
ಹಸಿ ನೆತ್ತಿ ಒತ್ತಿದಂತೆ
ಅದುಮಿದರೆ ಹಿಡಿಬೆಳ್ಳಿ
ಸರಕ್ಕನೆ ನೀರು ಹೀರುವ ಮೋಜು
ರೆಪ್ಪೆ ಮಿಟುಕಿನೊಳಗೆ
ಸ್ಲೇಟ ಮೇಲಿನ ನೀರು ಮಂಗಮಾಯ !
ಭೂಗೋಳ ಬರದಾಗ
ಮ್ಯಾಪಿನ ಬಂಗಾಳಕೊಲ್ಲಿಗೆ
ಅದನಿಟ್ಟು ಬಿಡುವ ಸಿಟ್ಟು ಸಂಭ್ರಮ.

ಹೆಣ್ಣು ಮೃದು. ಗಂಡು ಕಠಿಣ. ಭೌತಿಕವಾಗಿ ದೇಹರಚನೆಯಲ್ಲಿ ಹೆಣ್ಣು ಪ್ರತಿಯೊಂದು ಸೆಲ್‌ನಲ್ಲೂ ಗಂಡಿಗಿಂತ ವಿಭಿನ್ನಳು: ಅವಳ ಮಾಂಸ ಮೂಳೆಗಳು ಮೃದು, ಶಿಥಿಲ. ಈ ಭೌತಿಕ ಲಿಂಗಭೇದ ಲೈಂಗಿಕತೆಯ ಉದ್ರಿಕ್ತತೆಯಲ್ಲೂ ಕಂಡುಬರುವ ಗುಣ ವಿಶೇಷ: ಗಂಡು ವಜ್ರದಂತೆ ಕಠಿಣ, ಹೆಣ್ಣು ಕುಸುಮದಂತೆ ಮೃದು, ಲೈಂಗಿಕಾಂಗಗಳಲ್ಲಿ.

ಹೆಣ್ಣಿಗೆ ಆಪ್ಯಾಯಮಾನವಾಗಿರುವ, ಹೆಣ್ಣನ್ನು ಪ್ರತೀಕರಿಸುವ ಸ್ತನದಂತಿರುವ ನೀರು ಹೀರಿಕೊಂಡು ಭರಿಸುವ ಮೂಲ ಕ್ರಿಯೆಯಿಂದಲೇ ಪಯೋಧರವಾಗಿರುವ ರೂಪಕ ಸ್ತನ, metaphoric breast, ಸ್ಪಂಜು; ಅದರಿಂದ ತಾಯಿ: ಹೆಣ್ಣು. ಆ ಸ್ಪಂಜನ್ನು ಹಿಡಿದ ಮುಗ್ಧ ಬಾಲೆ, ಇನ್ನೂ ತಾಯಿಯ ಮೊಲೆಯನ್ನೇ ಆಶ್ರಯಿಸಿ, ಅದರ ಮೃದು ಸಾಂತ್ವನವನ್ನು ಸ್ಪಂಜಿನಲ್ಲಿ ಗ್ರಹಿಸುತ್ತಿರುವ ಅಮಾಯಕಿ. ಆದರೆ ಅದೇ ಕಾಲದಲ್ಲಿ a young boy is a young boy, but a young girl is a young woman ಎನ್ನುವಂತೆ, ಈ ಮೊಲೆ ಹೀರುವ ಬಾಲೆ ಮೊಲೆಯೂಡುವ ತಾಯಿಯೂ ಕೂಡಾ: ಅವಳ ಪಾಲಿಗೆ ಆ ಸ್ಪಂಜು "ಹಸಿ ನೆತ್ತಿ ಒತ್ತು"–ತಾಯಿಯಾದವಳು ತನ್ನ ಮೊಲೆಗೂಸಿನಲ್ಲಿ ಕಂಡುಕೊಳ್ಳುವ 'ಹಸಿ ನೆತ್ತಿ ಒತ್ತು'.

ಮುಗ್ಧೆ ಏಕ ಕಾಲದಲ್ಲಿ 'ಅದುಮಿ'ನಲ್ಲಿ ಸ್ತನದ ಸಾಂತ್ವನವನ್ನೂ, ತಾಯ್ತನದ

ಹೆಮ್ಮೆಯನ್ನೂ. 'ಮೋಜು' ಅವಳಿಗೆ ಎಷ್ಟು ಸಂಪೂರ್ಣವೆಂದರೆ, ಪರಿಪೂರ್ಣವೆಂದರೆ, ಅದು ಅವಳ ಪುಟ್ಟ ಸಂವೇದನಾ ಪ್ರಪಂಚಕ್ಕೆ ಇಡಿಯ 'ಭೂಗೋಳ'ವೇ ಹೌದು—

ಮ್ಯಾಪಿನ ಬಂಗಾಳ ಕೊಲ್ಲಿಗೆ
ಅದನಿಟ್ಟುಬಿಡುವ ಸಿಟ್ಟು ಸಂಭ್ರಮ.

ಮ್ಯಾಪಿನ ಬಂಗಾಳಕೊಲ್ಲಿಯ ನೀರನ್ನು ಬರೆದು ತುಂಬುವುದು ಮಗುವಿಗೆ ಎಷ್ಟು ಕಷ್ಟ: ಆದರೆ ಅವಳ ಸ್ಪಂಜು ಅವಳ ಪಾಲಿಗೆ ಸಪ್ತಸಾಗರ: ಅದನ್ನೇ ಕೊಲ್ಲಿಗಿಟ್ಟುಬಿಡುವ ಸಿಟ್ಟು, 'ಸಂಭ್ರಮವೂ' ಹೌದು.

ನೋಡಿ ಹೇಗೆ ಸ್ಪಂಜು, ಇನ್ನೂ ಹೆಣ್ಣಿನ ಬಂಧಕ್ಕೆ, ಅಂದರೆ ಫ್ರಾಕು, ಲಂಗ. ದಾವಣಿ, ಸೀರೆ—ಇವುಗಳ ಸೆರೆಗೆ, ಸಿಗದ ಮುಗ್ಧೆಗೆ, ಸ್ತನದಂತೆ 'ಮೋಜು' ಮತ್ತು 'ಸಂಭ್ರಮ' ಒಂದು ವಿಶೇಷ ರೀತಿಯಲ್ಲಿ ಸ್ಪಂಜು, ಸ್ತನ, ಅವಳಿಗೆ ಇಡಿಯ ವಿಶ್ವವನ್ನೇ ಗ್ರಹಿಸುವ ಅರಿಯುವ, ಅದರೊಂದಿಗೆ ವ್ಯವಹರಿಸುವ ಮಾಧ್ಯಮ: ಅವಳ ಪುಟ್ಟ ಜಗತ್ತು—ಅವಳ 'ಮೋಜು', 'ಸಂಭ್ರಮ'.

ಆದರೆ ಆ ಮುಗ್ಧ ಪ್ರಪಂಚ, ಅವಳ garden of Eden, ಅವಳಿಂದ ಬೇಗ ಸರಿಯುತ್ತದೆ: ಅವಳ innocence, ಹೆಣ್ಣಿನ ಲೈಂಗಿಕ ಬಂಧನಕ್ಕೆ experienceಗೆ ಕಟ್ಟುಬೀಳುತ್ತದೆ. ಫ್ರಾಕು–ಲಂಗ–ದಾವಣಿ–ಸೀರೆ ಅವಳ ಮುಗ್ಧತೆಯನ್ನು ದುರಾಕ್ರಮಿಸುತ್ತದೆ: ಅವಳು ಇನ್ನು 'ನಾಚುವ, ಅಂಜುವ, ನಟಿಸುವ' ಅನೈಸರ್ಗಿಕ ಸುಳ್ಳು ಪ್ರಪಂಚಕ್ಕೆ ಬಲಿಯಾಗುತ್ತಾಳೆ—ಈ ಬಲಿ ಮುಗ್ಧೆಯ ಹೆಣ್ಣಿನ ಮೃದು, ಸ್ಪಂಜು ಪ್ರಪಂಚದಿಂದ. ಗಂಡಿನ ಕಠಿಣ ಪ್ರಪಂಚಕ್ಕೆ:

ಬಳಪದಿಂದ ಪೆನ್ಸಿಲ್ಲು
ಪೆನ್ಸಿಲ್ಲಿನಿಂದ ಪೆನ್ನು

ನೋಡಿ, ಹೇಗೆ ಇನೋಸೆನ್ಸ್‌ನಿಂದ ಎಕ್ಸ್‌ಪೀರಿಯನ್ಸಿನ ಗಂಡು ಪ್ರಪಂಚ. ಗಂಡಿನ ಕಾಠಿಣ್ಯದಲ್ಲಿ ಲೈಂಗಿಕ, phallic ಸಂಕೇತವಾಗಿಬಿಡುತ್ತದೆ: ಆ ಗಂಡಿನ ಪ್ರಪಂಚವೂ ಬಳಪದಿಂದ ಪೆನ್ಸಿಲ್ಲಿಗೆ, ಪೆನ್ಸಿಲ್ಲಿನಿಂದ ಪೆನ್ನಿಗೆ. ಕ್ರಮವಾಗಿ ಕಠಿಣಗೊಳ್ಳುತ್ತದೆ-ಬಳಪದಿಂದ ಕಟ್ಟಿಗೆಗೆ (ಮರ್ದಿಗೆ). ಕಟ್ಟಿಗೆಯಿಂದ ನಿಬ್ಬಿಗೆ (ಲೋಹಕ್ಕೆ). ಹಾಗೆಯೇ ಹುಡುಗಿಯ ಫ್ರಾಕು ಲಂಗವಾಗಿ, ಲಂಗ ಸೀರೆಯಾಗಿ, ಬಟ್ಟೆಯಲ್ಲೂ. ಮೈ ಮುಚ್ಚುವಲ್ಲೂ. ನಗ್ನ ಮುಗ್ಧತೆಯನ್ನು. ಇನೋಸೆನ್ಸನ್ನು. ಮುಚ್ಚಿ ಸಮಾಧಿ ಮಾಡುವಲ್ಲೂ ಬೆಳೆಯುತ್ತದೆ. ಬೆಳೆಯುವ ಮುಗ್ಧೆ 'ಸೂರು ಸಿಕ್ಕಾ'ಗಿ 'ಸಿಕ್ಕ'ವಳು, 'ನುಸುಳು'ವವಳು. ಆ ಗಂಡು ಪ್ರಪಂಚದ ತರ್ಕ ಮಣ ಮುಂದುವರಿದಂತೆ, ಕಾಠಿಣ್ಯ ಹೆಚ್ಚಿದಂತೆ, ಹೆಣ್ಣುತನ. ಮೃದುತ್ವ ದೂರವಾಗುತ್ತದೆ—'ಸ್ಪಂಜು' ಹಿಂಜರಿಯುತ್ತದೆ: "ಅದು ನನ್ನಿಂದ ದೂರ ಸರಿಯಿತು".

ಸ್ಪಂಜು ಕೈ ಬಿಟ್ಟು ಪರಕೀಯವಾಗುತ್ತದೆ—ಬಂದಿಯಾಗಿ ಸೆರೆ ಬೀಳುತ್ತದೆ, ದಾಸ್ಯದಲ್ಲಿ ಘಾಸಿಯಾಗುತ್ತದೆ.

ಅಮ್ಮನ ದೇವರ ಗೂಡಿಂದ
ಅಪ್ಪನ ಕಪಾಟಿಗೆ
ಅಲ್ಲಿಂದ
ನನ್ನಕ್ಕನ ಮಗಳ ಇತರ ಕೆಲಸಕ್ಕೆ
ಓಡಾಡಿತು

ಕೊನೆಗೆ ಅದರ ಗತಿ

ಈಗದರ ಸಾಮ್ರಾಜ್ಯ:
ಕೊಟ್ಟಿಗೆ ಅಟ್ಟದಲ್ಲಿ
ಒಂದೇ ಪ್ರಶ್ನೆ: ಎಸೆಯುವುದೆಂದು ?

ಈ 'ಎಸೆ' ಯಲ್ಲಿರುವ ಮರ್ಮಭೇದಕವಾದ ನೋವನ್ನು ಗಮನಿಸಬೇಕು. ಹೆಣ್ಣನ್ನು ಸಂಕೇತಿಸುವ "ಸ್ಪಂಜು" ಬಳಕೆ ತೀರಿದ ಹೆಣ್ಣಿನಂತೆ, ಬಂಜೆಯಂತೆ, ವಿಧವೆಯಂತೆ, ಭ್ರಷ್ಟಳಂತೆ 'ಪರಿತ್ಯಕ್ತ' ವಸ್ತು. ಜಾನಪದದ ಈ ಸಾಲಿನಲ್ಲಿ 'ಎಸೆ' ಎಂತಹ ಹೃದಯ ವಿದ್ರಾವಕವಾದ ಅವಸ್ಥೆ !:

ಬಾಲೇರಿಲ್ಲದ ಬಾಲೇದ್ಯಾತರ ಜನ್ಮ
ಬಾಳೆಲೆ ಹಾಸ್ಯುಂಡು
ಬೀಸಿ ಎಸೆದಂಗ

ಹಾಗೆಯೇ ಬಳಕೆಗೆ ಬಾರದ ಹೆಣ್ಣು ಸೀತೆ, ಪರಿತ್ಯಕ್ತಳಾಗಿ ಬೆಂಕಿಗೆ ದೂಡಲ್ಪಡುತ್ತಾಳೆ, ಕಾಡಿಗೆ ಅಟ್ಟಲ್ಪಡುತ್ತಾಳೆ—ಬಳಕೆ ತೀರಿದ ಸ್ಪಂಜಿನಂತೆ "ಎಸೆ"ಯಲ್ಪಡುತ್ತಾಳೆ.

ಎಸೆಯುವ ಅವಸ್ಥೆಗೆ ಬಂದ ಸ್ಪಂಜು ತನ್ನತನವನ್ನು ಕಳೆದುಕೊಂಡಂತದ್ದು. ಪಲ್ಲಟಗೊಂಡಂತಾದ್ದು: ಯಾವುದು ನೀರನ್ನು ಹಿಡಿದು ಭರಿಸಬೇಕಾದದ್ದೋ, ಪಯೋಧರವಾಗಿ ಸ್ತನದ ಅಸ್ತಿತ್ವವನ್ನು ಪಡೆದು, ಸ್ಪಂಜಿನ ವಸ್ತು ವಿಶೇಷವಾಗಿ ಬಾಳಬೇಕಿತ್ತೋ, ಹೆಣ್ಣಾಗಬೇಕಿತ್ತೋ, ಅದು ಈಗ ತನ್ನ ಗುಣವನ್ನು ಕಳೆದುಕೊಂಡಿದೆ:

ಮೇಲೆ ಬಿದ್ದ ನೀರು
ಹರಿಯುತ್ತಿದೆ ದಿಕ್ಕಿಲ್ಲದೆ

ಈ ಮುಂಚೆ ಮೇಲೆ ಬಿದ್ದ ನೀರಿಗೆ ದಾರಿ, ಗುರಿ, ಆಶ್ರಯ ಎಲ್ಲವೂ ಸ್ಪಂಜಾಗಿತ್ತು. ಸ್ಲೇಟು ನೀರನ್ನು 'ಮಂಗಮಾಯಿಸಿದ' ಇಡೀ 'ಬಂಗಾಳಕೊಲ್ಲಿ'ಯಷ್ಟು ಅನಂತತೆಯ ಸ್ಪಂಜು ಈಗ ನೀರನ್ನು ಒಳಗೊಳ್ಳಲಾರದು. ನೀರನ್ನು ಅಂದರೆ ಜೀವವನ್ನು ಪ್ರೇಮದಲ್ಲಿ ಹೀರಿ ಮೈಗೂಡಿಸಿಕೊಂಡು 'ಮೋಜಿ'ನಲ್ಲಿ 'ಸಂಭ್ರಮ'ದಲ್ಲಿ 'ಹಿಡಿಬೆಳ್ಳಿ' ಹಿಗ್ಗಲಾರದು. ಹಾಗೆಯೇ ಹೆಣ್ಣು ಮುದಿಯಾಗುವಷ್ಟಕ್ಕೆ, 'ಹೆಣಗಿ' ಅಜ್ಜಿಯ ಅವಸ್ಥೆಯನ್ನು ತಲುಪಿದಾಗ ನಿರರ್ಥಕಳಾಗುತ್ತಾಳೆ:

ಲೋಕವನ್ನೇ ಬಾಚಿ ತಬ್ಬಲು
ಹೆಣಗಿದ ಅಜ್ಜಿ
ಕೈ ಚೆಲ್ಲಿ ಮಲಗಿದಳು.

"ಸ್ಪಂಜು" ತಾನು ಬಾಚಿ ತಬ್ಬುವ ನೀರಿನಂತೆ, ಅಜ್ಜಿಯೂ ಬಾಚಿ ತಬ್ಬುವ ಪ್ರೇಮ ಜವಳು. ಆದರೆ ಹೇಗೆ ಸ್ಪಂಜು ಸಲಹಿದ ಪ್ರಪಂಚದ ಸ್ಪಂಜಿಗೆ ಕೃತಘ್ನವೋ ಹಾಗೆಯೇ ಅಜ್ಜಿಯ ಪ್ರಪಂಚವೂ ಅಜ್ಜಿಯ ಬಗ್ಗೆ ಉದಾಸೀನ.

ಆ ನಿರಾಶೆಯ ಪರಮಾವಧಿಗೆ ಹೇಗೆ 'ಬಾಚಿತಬ್ಬಿ'ದ ಕೈಯೇ 'ಚೆಲ್ಲಿ'ಕೊಳ್ಳುವಲ್ಲಿ 'ಎಸೆ'ಯಲ್ಪಡುವಲ್ಲಿ ಹೃದಯವಿದ್ರಾವಕವಾಗುತ್ತದೆ, ನೋಡಿ:

ಲೋಕವನ್ನೇ ಬಾಚಿ ತಬ್ಬಲು
ಹೆಣಗಿದ ಅಜ್ಜಿ
ಕೈ ಚೆಲ್ಲಿ ಮಲಗಿದಳು.

ಇದೊಂದು ಅನನ್ಯ ದಾರುಣತೆಯ ಪ್ರತಿಮೆ—ಬಾಚಿ ತಬ್ಬಿದ ಜೀವಂತ ಕೈಯ, ಪ್ರೇಮದ ದೇಹಾಂಗ, ಈಗ ಅಂಗಾತವಾಗಿ 'ಚೆಲ್ಲಿ ಮಲಗಿ'ದೆ--ಎಸೆದ ಹೆಣವಾಗಿ ಪರದೇಶಿಯಾಗಿದೆ, ನಿಸ್ತೇಜವೂ ನಿರರ್ಥವೂ ಆಗಿದೆ. ಆ ಲೋಕವನ್ನೇ, ಬಂಗಾಳ ಕೊಲ್ಲಿಯನ್ನೇ, ಸಾಗರವನ್ನೇ ಬಾಚಿ ತಬ್ಬಿದ ಆ ಸ್ಪಂಜು. ಈಗ 'ಬಿದ್ದ ನೀರ'ನ್ನು 'ದಿಕ್ಕಿಲ್ಲ'ದೆ 'ಹರಿ'ಸುವ, ನೀರನ್ನು 'ಚೆಲ್ಲಿ'ಬಿಡುವ ಈ ಸ್ಪಂಜು ಆಗಿದೆ. ಇದೀಗ 'ಸ್ಪಂಜಿ'ನ ಮುಗ್ಧ, ಎಳೆಯಳು, ಅಜ್ಜಿಯ ಭಯಾನಕ ಸರದಿಯಲ್ಲಿದ್ದಾಳಂತೆ-- 'ಅಜ್ಜನ ಹಿಂದೆ ನಿಂತ' ಳು:

ಜಗಲಿಯಾಚಿನಲಿ ಕುಳಿತ
ಅಜ್ಜನ ಹಿಂದೆ ನಿಂತ
ನಾನು

ನೋಡಿ, ಹೇಗೆ 'ಜಗಲಿಯಾಚಿನಲಿ' ಅಂದರೆ ಮನೆಯ ಹೊರಗಿನ ಅಂಚಿನಲಿ, ಹೊರ ಗಾಗುವುದನ್ನು, ಅಂದರೆ ಸಾಯುವುದನ್ನು ಕಾಯುತ್ತಿರುವ, ಅಜ್ಜಿಯನ್ನು ಹಿಂಬಾಲಿ ಸುತ್ತಿರುವ, ಅಜ್ಜ ಸಾಯುವವನೂ ಆಗಿ 'ಸಾವ'ನ್ನು ಸಂಕೇತಿಸುತ್ತಿದ್ದಾನೆ--ಯಮ ನಂತೆ, Fate ನಂತೆ: ಈಗ ಬೆಳೆದು ನಿಂತ ಸ್ಪಂಜಿನ ಎಳೆಯಳಿಗೆ ಅಜ್ಜಿಯ ಅವಸ್ಥೆಯ ದೀಕ್ಷೆ ಕೊಡುತ್ತಿದ್ದಾನೆ--ಸರದಿ ಕಾಯುತ್ತಾ 'ಹಿಂದೆ ನಿಂತ'ವಳಿಗೆ.

ಇದೀಗ ಹೃದ್ಭೇಧಕವಾದ ನೋವು: ದುಃಖ--

ನಾನು
ಅದಿದ್ದ ನನ್ನ ಚೀಲವನ್ನು
ತಡಕಾಡುತ್ತೇನೆ.
ಎಂಥದೋ ನೋವು

'ನಾನು', 'ನನ್ನ ಚೀಲ'--ಈ ಪದಗಳು ಸ್ಥಾಪಿಸುವ 'ನಾನು, ನನ್ನದು'ಗಳ ವ್ಯಕ್ತಿ

ವಿಶಿಷ್ಟತೆ. ಮಮತೆ--self-hood, me and my-ness, privacy--ಗಮನಿಸಬೇಕಾದ್ದು. ಬೆಳೆದು ನಿಂತ ಎಳೆಯುಳು ತನ್ನ ಎಳೆತನಗು ಮುಗ್ಧತೆ, ಇನೋಸೆನ್ಸ್. ಕಳೆದುಕೊಂಡಿದ್ದಾಳೆ--ತನ್ನ ಕನ್ಯತ್ವ, ವರ್ಜನಿಟಿ ಅಂದರೆ ತನ್ನ ಸ್ವಯಂಪೂರ್ಣತೆಯನ್ನು. ಸ್ವಾಸ್ಥ್ಯವನ್ನು, ಸಾಂತ್ವನವನ್ನು. ತನ್ನ 'ಸ್ಪಂಜಿನ' ಸಹಜ ಪ್ರೇಮದ ಪಯೋಧರತ್ವವನ್ನೂ, ಕಳೆದುಕೊಂಡಿದ್ದಾಳೆ; ತನ್ನ 'ಚೀಲದ' ಅಮೂಲ್ಯತೆಯನ್ನು. 'ಕನ್ಯಾರತ್ನ'ವನ್ನು, ಒಡವೆಯನ್ನು--ಏಕೆಂದರೆ ಸ್ಪಂಜು 'ಹಿಡಿಬೆಳ್ಳಿ', ಹೆಣ್ಣಿಗೆ ಲಾಂಛನವಾದ ಬೆಳ್ಳಿ ಬಂಗಾರಗಳಂತೆ, ಆಭರಣಗಳಂತೆ, ಕೈ ತುಂಬುವ 'ಆಭರಣ' (ಭರಿಸುವ ಲಾಂಛನ)--ಕಳೆದುಕೊಂಡಿದ್ದಾಳೆ. "ಸ್ಪಂಜು" ಮತ್ತು "ಚೀಲ". "ಸ್ತನ" ಮತ್ತು "ಗರ್ಭ"ವನ್ನು ಸಂಕೇತಿಸುವಲ್ಲಿ ಹೆಣ್ಣಿನ ರೂಪಕಗಳು.

ಇದು ಹೆಣ್ಣು ಎಳೆಯುಳು ಬೆಳೆದುದಕ್ಕೆ, ಬಳಪ-ಪೆನ್ಸಿಲು-ಪೆನ್ನುಗಳ ಕೈ ಹಿಡಿದದ್ದಕ್ಕೆ. ಗಂಡು ಜಗತ್ತಿನ ದುರಾಕ್ರಮಣಕ್ಕೆ ಮೈಯೊಡ್ಡಿದ್ದಕ್ಕೆ, ಫ್ರಾಕು-ಲಂಗ-ದಾವಣಿ-ಸೀರೆಗಳ 'ಸಿಕ್ಕಿ'ಗೆ ಸಿಕ್ಕು ಬಲಿಬಿದ್ದದ್ದಕ್ಕೆ--ಮುಗ್ಧತೆಯು, 'ಸರಕ್ಕನೆ ನೀರು ಹೀರುವ' ಸ್ಪಂಜಿನ ಸಹಜತೆಯನ್ನು, ನೈಸರ್ಗಿಕತೆಯನ್ನು ಕಳೆದುಕೊಂಡು 'ನಾಚುವ-ಅಂಜುವ-ನಟಿಸುವ' ಅಸಹಜತೆ, ಅನೈಸರ್ಗಿಕತೆಯನ್ನು ಆವಾಹನೆ ಮಾಡಿಕೊಂಡದ್ದಕ್ಕೆ, 'ಚೀಲ'ದ ಸ್ವತ್ತನ್ನು ಕಳೆದುಕೊಂಡದ್ದಕ್ಕೆ--ತಾನು ತೆರಬೇಕಾದ ಬೆಲೆ, ಕೊಟ್ಟುಕೊಳ್ಳಬೇಕಾದ ಬಲಿ

ಹೀಗೆ ತನಗರಿಯದೆ ತಾನು ಗಂಡುಪ್ರಪಂಚಕ್ಕೆ ಸಿಕ್ಕು ವಂಚನೆಗೊಂಡ ಹೆಣ್ಣು, 'ಲೋಕವನ್ನೇ ಬಾಚಿ ತಬ್ಬುವ' ಇನೋಸೆನ್ಸನ್ನು, ತನ್ನತನವನ್ನು, 'ಸ್ಪಂಜ'ನ್ನು, ಕಳೆದುಕೊಂಡವಳು--ತನ್ನ "ಅಜ್ಜಿ"ಯಂತೆ 'ಹೆಣಗಿ', (ಆ 'ಹೆಣಗಿ'ಯು ಧ್ವನಿಸುವ 'ಹೆಣ' ಗಮನಿಸಿ)ದರೂ 'ಅಜ್ಜಿ'ಯಂತೆಯೇ ನೈರಾಶ್ಯದಲ್ಲಿ 'ಕೈಚೆಲ್ಲಿ ಮಲಗ'ಬೇಕಾದವಳು, ಅಜ್ಜನ 'ಹಿಂದೆ ನಿಂತ', 'ಅಜ್ಜಿ'ಯ ಹಿಂಬಾಲಕಳು, ಸರದಿಯವಳು.

ಆದರೆ ಅವಳ ನೋವು ಸಾವಿನದ್ದಲ್ಲ--"ಸಾವು" ನಿರರ್ಥಕತೆಯ ಪರಮಾವಧಿ ಹೌದು--ಆದರೆ, ಸಾವಿಗಿಂತ ಘೋರವಾದ 'ತಡಕಾಡುವಿಕೆ'ಯದು: ಆ ನೋವು ಹೆಣ್ಣಾದವಳಿಗೆ ಮಾತ್ರ, ಆ ಹೆಣ್ಣುತನದ, 'ಸ್ಪಂಜಿ'ನ ಅಸ್ತಿತ್ವವನ್ನು, ಒಲವಿನ ಮುಗ್ಧತೆ, ಅನನ್ಯತೆಯನ್ನು ಕಳಕೊಂಡವಳಿಗೆ ಮಾತ್ರ--ಮುಗ್ಧತೆ, ಕನ್ಯತ್ವವನ್ನು (innocense, chastityಯನ್ನೂ) ಕಳಕೊಂಡವಳಿಗೆ ಮಾತ್ರ--ಅನುಭವವಾಗಬಲ್ಲ ನೋವಿನದು--ಅವಳಿಗೂ ಗಂಡುಪ್ರಪಂಚದ ಭಾಷೆಯಲ್ಲಿ ಹೇಳಲಾಗದ 'ಎಂಥದೋ' ನೋವಿನದು.

ಹೆಣ್ಣು ಸ್ಪಂಜಿನಂತೆ ಬಳಕೆಗೊಂಡು. ಬಳಕೆ ತೀರಿದ ಮೇಲೆ ಸಮಾಜದ ಗೂಡು', 'ಕಪಾಟು', 'ಅಟ್ಟ'ಗಳ ನಿರ್ದಿಷ್ಟ **ಖಾನೆ** ಸೇರುವವಳು: 'ಅಜ್ಜಿ'ಯಾಗುವವಳು. ಆ ಹೆಣ್ಣಿನ ನಿರರ್ಥಕತೆ, ನಿರಾಶಾಜೀವನ ಕೊನೆಗೆ 'ಅಜ್ಜಿ'ಯಾಗಿ 'ಹೆಣಗು'

‘ಹೆಣ’ವಾಗು–ವಲ್ಲಿ, ಮತ್ತು ಕಟ್ಟಕಡೆಗೆ ‘ಕೈಚೆಲ್ಲಿ’–‘ಚೆಲ್ಲು’ ಹೇಗೆ ‘ಬಾಚು’ವ ‘ತಬ್ಬು’ವ, ಒಳಗೊಳ್ಳುವ ಕ್ರಿಯೆ ಗೆ ವಿರುದ್ಧವಾದ ‘ಎಸೆತ’ವನ್ನು ಧ್ವನಿಸುವ, ಹಾಗೂ ನಿರರ್ಥಕತೆಯನ್ನು ಘನೀಭೂತಗೊಳಿಸುವ ಪ್ರಖರ ರೂಪಕವೆಂಬುದನ್ನು ಗಮನಿಸಿ–‘ಮಲಗು’ವಲ್ಲಿ ದಾರುಣತೆಯ ಪರಾಕಾಷ್ಟತೆಯನ್ನು ಪಡೆದುಕೊಳ್ಳುತ್ತದೆ:

**ಲೋಕವನ್ನೇ ಬಾಚಿ ತಬ್ಬಲು**
**ಹೆಣಗಿದ ಅಜ್ಜಿ**
**ಕೈ ಚೆಲ್ಲಿ ಮಲಗಿದಳು** (ಒತ್ತು ನನ್ನದು)

ಹೀಗೆ “ಸ್ಪಂಜು” ಹೆಣ್ಣು ಹಿಂಡಿ. ಹಣ್ಣಾಗಿ ಹೆಣಗುವ “ಅಜ್ಜಿ”ಯಾಗುತ್ತಾಳೆ–‘ಬಂಜೆ’ಯಾಗುತ್ತಾಳೆ. ಈ ‘ಅಜ್ಜಿ’ಯೇ ಹೆಣ್ಣಿನ ಪ್ರಾಣಭಯ—ಹೆಣ್ಣಿನ ಜೀವನದುದ್ದಕ್ಕೂ ಕಾಡುವ, haunt ಮಾಡುವ ಭೂತ. “ಅಜ್ಜಿ” ಹೆಣ್ಣಿಗೆ ಪ್ರೇಮ–ಭಯಗಳ ದ್ವಂದ್ವ: “ಅಜ್ಜಿ”ಯಾಗುವಲ್ಲಿ ಹೆಣ್ಣು ಬೇಕಾದವಳಷ್ಟೇ ಬೇಡಾದವಳೂ ಕೂಡಾ: ಹೆಣಗುವುದರಿಂದ ಇಷ್ಟವಾದವಳೂ. ಹೆಣಗುವ ಕ್ರಿಯೆಯಿಂದ ಹೆಣವಾಗುವವಳೂ ಹೌದು–‘ತಬ್ಬ’ ಕೈಯವಳೂ, ‘ಚೆಲ್ಲು’ ಕೈಯವಳೂ: ಸ್ಪಂಜಿನಂತೆ ‘ಪ್ರಿಯ’ಳೂ ಉಪಯುಕ್ತತೆ ತೀರಿದ ನಂತರ ‘ಎಸೆ’ಯಲು ಪಕ್ಕಾದವಳೂ.

ಒಂದು ವಿಶಿಷ್ಟ ಭಯಾನಕ ಅರ್ಥದಲ್ಲಿ ಹೆಣ್ಣೇ ಸ್ಪಂಜು, ಅಜ್ಜಿ: ಸ್ಪಂಜಿನಂತೆ–ಇಂಗ್ಲಿಷಿನಲ್ಲಿ ಸ್ಪಂಜ್ ಎಂದರೆ ಪರಾವಲಂಬಿ, ಇತರರ ಒಳ್ಳೆಯತನದ ಲಾಭ ಪಡೆ ಎಂದರ್ಥ–ಪರಾವಲಂಬಿ. ಗಂಡನ್ನಾಶ್ರಯಿಸಿಯೇ ಬಾಳುವವಳು; ಹಾಗೆಯೇ ಸ್ಪಂಜು ತನ್ನ ನೀರು ಭರಿಸುವ ಗುಣ ಕಳಕೊಂಡಾಗ ಬೇಡವಾದಂತೆ, ಬೇಕು–ಬೇಡದ ವಸ್ತು–ಅಜ್ಜಿ.

ಹೀಗೆ “ಅಜ್ಜಿ” ಹೆಣ್ಣಿಗೆ ಮೂಲ ಭಯ–ಪ್ರೇಮ–ದ್ವೇಷಗಳ love-hate ನ ಸಂಕೇತ. ಅದರಿಂದಲೇ ಅನೇಕ ಲೇಖಕಿಯರ ಕವನಗಳಲ್ಲಿ “ಅಜ್ಜಿ” ಒಂದು ಕಡ್ಡಾಯ ವಸ್ತು, ಸಂಕೇತ. ಡಿ. ವಿಜಯಾ ಅವರ ಇನ್ನೊಂದು **ಮಿರುಗುವ ಗೋರಿಗಳು** ಕವನದಲ್ಲಿ “ಅಜ್ಜಿ” ಕಾಣಿಸಿಕೊಳ್ಳುತ್ತಾಳೆ:

ಉದುರಿದ
ನಲವತ್ತು ವಸಂತಗಳ
ರೆಪ್ಪೆ ಕೂದಲ
ಸೀಳುತ್ತಾ ಕುಳಿತ
ಅರೆಮುದುಕಿಯ ಮುಂದೆ
ಕಣ್ಣು ಹೊಡೆಯುತ್ತಿದೆ:
ಮಿರುಗುವ ಗೋರಿ

ಅದೇ ಮೂಲಭಯ, archetypal fear–ಅರೆ ಮುದುಕಿ, “ಅಜ್ಜಿ”.

**ಚ. ಸರ್ವಮಂಗಳಾ**ರ ಕವನಗಳಲ್ಲಿ ಅಜ್ಜಿ ಪ್ರಧಾನ ರೂಪಕವೆಂದೇ ಹೇಳ

ಬೇಕು: ಅಷ್ಟೇ ಅಲ್ಲ ಅವರಿಗೆ ಹೆಣ್ಣು ಗ್ರಹಿಕೆಯ ಪ್ರಬಲ ಮಾಧ್ಯಮ–ಮತ್ತೆ ಮತ್ತೆ ಮರುಕಳಿಸಿ ಬರುವ ಪ್ರತಿಮಾ ಸಂವಿಧಾನ. **ಬಹುಳ ಬಗೆಯಾಟದಲ್ಲಿ** ಈ ಸಾಲು ಗಳನ್ನು ನೋಡಿ:

ಯುಗಾದಿ ಬಂದಾಗಲೆಲ್ಲ ಆಗುತ್ತದೆ
ಮನಸ್ಸು ಹಿಮ್ಮುಖ___
ಮನಸ್ಸಿನಲ್ಲಿ ಕುಟ್ಟುತ್ತಾ ಕೂರುತ್ತಾಳೆ ನನ್ನಜ್ಜಿ.

ಇದೀಗ "ಅಜ್ಜಿ" ಹಾಂಟ್ ಮಾಡುತ್ತಿರುವ 'ಭೂತ'–ಕಾಡುವ 'ಭೂತಕಾಲ'– 'ಮನಸ್ಸು ಹಿಮ್ಮುಖ'–ಹಾಗೂ ಪೀಡಿಸುವ 'ದೆವ್ವ', 'ದೇವತೆ'.

ಇಡಿಯ ಪದ್ಯದ ತಂತ್ರ, ಈ 'ಅಜ್ಜಿ' 'ದೆವ್ವ'ವನ್ನು 'ದೇವತೆ'ಯಾಗಿ ಕಂಡು ಕೊಳ್ಳುವ ಸಾಧನೆ.

ಪದ್ಯದ ಹೆಣ್ಣು ಸೋತವಳು, ಸಾಕಾದವಳು–'ಸುಸ್ತೋ ಸುಸ್ತು', 'ದಿಗಿಲೋ ದಿಗಿಲು' ಬಿದ್ದವಳು; 'ಹಿಡಿಹಿಡಿಯಾಗಿ ತುಂಬಿದ್ದು ಬತ್ತುತ್ತಿ'ರುವುದನ್ನು ನೋಡಿ ನಿರಾಶೆಯಲ್ಲಿ ನಿಂತವಳು : ಅವಳ ಪ್ರಾಣ 'ಗಾಳಿ',

ತೇಗೂ ಆಗದೆ ಗ್ಯಾಸೂ ಕೂಡ ಆಗದೆ
ಹುಳಿಯಾಗಿ ಹಿಡಿಮ ಹೊಟ್ಟೇ ಉಬ್ಬರಿಸಿ ಸತಾಯಿಸುತ್ತಿದೆ

ಒಂದು ವಿಶೇಷ ರೀತಿಯಲ್ಲಿ ಹೆಣ್ಣು ಹೆಣ್ಣಾಗಿರುವುದಕ್ಕೇ ಅಸ್ವಸ್ಥಳು : ರೋಗಿ: ಸೋತವಳು, ಸಾಕಾದವಳು. ಅದಕ್ಕೇ ಅವಳು ಕೀರ್ತಿಸುವ ಅಜ್ಜಿ–'ಸಹನಾಯೋಗಿ', 'ಶಬರಿ'. ಆದರ್ಶ ಅಪರೂಪ. ಇಂತಹ ಅಪರೂಪವನ್ನು, ಆದರ್ಶವನ್ನು ಎತ್ತಿ ಹಿಡಿದುಕೊಂಡು ತನ್ನ ಬಾಳನ್ನು ಹಳಿದುಕೊಳ್ಳುತ್ತಿದ್ದಾಳೆ, ಅವಳ ಜೈವಿಕ ಸಂವೇದನೆ ಗಳನ್ನು, ಸಹಜತೆಯನ್ನು ಬಯ್ಯುತ್ತಿದ್ದಾಳೆ :

ಇದೆಲ್ಲಾ ಗೊಡ್ಡು ಗೊಡ್ಡಾ, ಸಂಪ್ರದಾಯದ ದಬ್ಬಾಳಿಕೆ
ಎಂದೆಲ್ಲ ಕೊಚ್ಚಿಕೊಂಡಿದ್ದ ನನಗೆ ಸುಸ್ತೋ ಸುಸ್ತು.

ಹೆಣ್ಣು ತನ್ನ ಮೊದಲ ಸಂವೇದನೆಯನ್ನು, ಸಹಜ ಸ್ಪಂದನವನ್ನು, ಈಗ 'ಕೊಚ್ಚಿಕೊಂಡ' ಜಂಬ, ಹರಟೆ ಎಂದುಕೊಳ್ಳುತ್ತಿದ್ದಾಳೆ. ಜೊತೆಗೆ "ಅಜ್ಜಿಯ ಬಾಳು ಸೈ ಎನಿಸಿಕೊಂಡಾಂಥದ್ದು: ಎಲ್ಲರೂ 'ಒಲೆ ಹೂಡದೆ', 'ಅಜ್ಜಿಯ ಕರ್ಮಾಂ ತರಕ್ಕೆ' ಬರುತ್ತಾರೆ: ಆಗಲೇ ಅವಳಿಗೆ ತನ್ನ ಸಂವೇದನೆಯ ಬಗ್ಗೆ 'ಸುಸ್ತು' 'ದಿಗಿಲು' ಆವದ್ದು. ಈ ಅಜ್ಜಿಯ ಉಪದೇಶವನ್ನು ಕೇಳಿ :

'ಬದುಕ ಬಗೆ ಬಾರದು ಮಗಳೆ ಅದರ
ಒಳ ಹೊಗಬೇಕು, ಬಗೆದರೇನಲ್ಲಿ ಇಬ್ಬಾಗ
ಅಷ್ಟೆ'

ಅಜ್ಜಿಯ ಬಗ್ಗೆ ಹೆಣ್ಣಿನ ಅನಿಸಿಕೆ ಇದು :

ಅಜ್ಜಿ ತಾನೊಸೆದ ಬತ್ತಿಯಂತೆ ಬೆಳಗಿದಳು ಮಂದವಾಗಿ, ಸಂಪಾಗಿ

ಅಜ್ಜಿಯು ಆದರ್ಶ ಜೀವನ "ಸಂದವಳು" ಎನಿಸುವಂತಾದ್ದು: ಆದರೂ ಹೆಣ್ಣಿಗೆ ಅವಳ ಪರಿಪೂರ್ಣತೆಯ ಬಗ್ಗೆ ಅನುಮಾನವಿಲ್ಲದಿಲ್ಲ:

ಸಂದವಳಂತೆ
ಆಡಿದವಳ ಮನದಲ್ಲಿ ಮಿಡುಕಿರಬಹುದೇ
ಕತ್ತರಿಸಿದ
ಹೊಕ್ಕಳಬಳ್ಳಿ, ಅನುಮಾನಕ್ಕೆಡೆಕೊಡದೆ
ಎಡೆತಂದ
ಅಜ್ಜಿಗೆ ಸಂತೃಪ್ತ ತೇಗು

ಆದರೆ ಅಜ್ಜಿಯ ಸಂತೃಪ್ತ 'ತೇಗಿ'ನಂತೆ ತನ್ನ ಉಸಿರು 'ತೇಗಾ'ದವಳು, ಅದು 'ಹುಳಿಯಾಗಿ ಹಿಡಿದು ಹೊಟ್ಟೇನ ಉಬ್ಬರಿಸಿ ಸತಾಯಿಸುತ್ತಿ'ರುವುದನ್ನು ಅನುಭವಿಸುತ್ತಿರುವವಳು. ಅಜ್ಜಿಯನ್ನು ಆದರ್ಶೀಕರಿಸಿಕೊಳ್ಳುತ್ತಿದ್ದಾಳೆ. ಅವಳ 'ಅನುಮಾನಕ್ಕೆಡೆ ಕೊಡದ' ಜೀವನವನ್ನು ಮೆಚ್ಚಿಕೊಳ್ಳುತ್ತಿದ್ದಾಳೆ. ಅವಳ ಸಂಪೂರ್ಣ ಸಂಪ್ರದಾಯಕ್ಕೆ ಬಾಗಿದ, ಅದಕ್ಕೆ 'ಕೊಂಡಿ'ಯಾದ ಜೀವನವನ್ನು—**ಕೊಂಡಿ** ಹೇಗೆ ಸಂಕೋಲೆಯನ್ನು ಪುಷ್ಟೀಕರಿಸುತ್ತದೆ, ಅದನ್ನು ಅನಂತಗೊಳಿಸುತ್ತದೆ ಎಂಬುದನ್ನು ಗಮನಿಸಿ— ಹೊಗಳುತ್ತಾ, ತಾನೇಕೆ 'ಕೊಂಡಿ'ಯಾಗಲಿಲ್ಲ. ಸಂಕೋಲೆಗೆ ಸರಪಣಿಯಾಗಲಿಲ್ಲ, ದಾಸ್ಯಕ್ಕೆ ಬಾಗಲಿಲ್ಲ ಅಜ್ಜಿಯಂತೆ ಎಂದು ಪರಿತಪಿಸುತ್ತಾಳೆ. ತನ್ನ ಮುಂಬಿನ ಜೀವನ ಪರಿಕಲ್ಪನೆಗೆ, ಅಜ್ಜಿಯ ಬಾಳು 'ಗೊತ್ತು, ಸಂಪ್ರದಾಯದ ದಬ್ಬಾಳಿಕೆ' ಎನ್ನುತ್ತಿದ್ದ ತನ್ನ ಹಿಂದಿನ ಅನಿಸಿಕೆಗೆ ತಾನೆ ರಿಯಾಕ್ಷನರಿಯಾಗಿ :

ನಾನ್ಯಾಕೆ ಅವಳಂತೆ ಬದುಕ ಹೊಕ್ಕು ಬರಲಾರೆ
ಕೊಂಡಿ ಕಳಕೊಳ್ಳದ ಅಜ್ಜಿ
ನನಗ್ಯಾಕೆ ಆಗಲಿಲ್ಲ ಕೊಂಡಿ ?

ಕವನದ ಶೀರ್ಷಿಕೆ ಬದುಕು ಬಗೆಯಾಟ: ಅಂದರೆ ಬದುಕು ಬಗೆಯ ಆಟ, ಅಥವ ಬದುಕು ಬಗೆಯುವ ಆಟ: ಬದುಕು ಬಗೆಯ ಆಟ ಅಥವಾ ಬದುಕು ತಿಳಿಯುವ, ಬಗೆದು ನೋಡುವ ಆಟ. ಅಜ್ಜಿ ಹೇಳುತ್ತಾಳೆ:

ಬದುಕ ಬಗೆ ಬಾರದು ಮಗಳೆ ಅದರ
ಒಳಹೊಗ ಬೇಕು, ಬಗೆದರೇನಲ್ಲಿ, ಇಬ್ಬಾಗ

ಇದು ಅತ್ಯಂತ ಗಂಭೀರವೂ, ಗಂಭೀರವೂ ಆದ ಮಾತು. ಅಜ್ಜಿ ಹೇಳಬೇಕು "ಬದುಕ ಹೊಗಬೇಕು": ಅಂದರೆ ಬದುಕನ್ನು ಅಜ್ಜಿ ಹೊಕ್ಕಂತೆ, ಹೊಗುವುದು ಸಂಪ್ರದಾಯಕ್ಕೆ ಸಂಪೂರ್ಣ ಶರಣಾಗತಿಯಾಗುವುದು: ಸಂಶಯಕ್ಕೆ ಎಡೆಯೇ ಕೊಡದೆ (ನೋಡಿ, ಹೇಗೆ ಇಲ್ಲಿ ಸಂಶಯದ 'ಎಡೆ', ತಿನ್ನುವ 'ಎಡೆ', ನೈವೇದ್ಯ, ಹಾಗೂ ತಿನ್ನಬಾರದ 'ಎಡೆ'ಯಾಗಿದೆ!) ದುಡಿಯುವುದು, ಶ್ರಮಿಸುವುದು, ಕಾಯಕವೇ ಆಗಿಬಿಡುವುದು: ಸಹಿಸುವುದು, ಯೋಗಿಯಂತೆ, ಕಾಯುವುದು, ಶಬರಿಯರಿಯಂತೆ: ಒಟ್ಟಿನಲ್ಲಿ

ಸಂಪ್ರದಾಯಕ್ಕೆ ಕೊಂಡಿಯಾಗುವುದು.

ಈ ಸರಪಳಿಯ 'ಕೊಂಡಿ'ಯಾಗುವುದೇ, ಕವನದ ಹೆಣ್ಣಿಗೆ ಬದುಕು 'ಹೊಗು' ವುದೇ, 'ಹೊಕ್ಕು ಬರು'ವುದೇ, ಆದಂತಿದೆ.

ಹೆಣ್ಣು ಇಲ್ಲಿ ತನ್ನನ್ನು ತಾನು ವಂಚಿಸಿಕೊಂಡಂತಿದೆ. ಬದುಕು ಬಗೆಯಲು, ಅಂದರೆ ಅಗೆದು ಶೋಧಿಸಿ ನೋಡಲು, ತಿಳಿಯಲು, ಅರಿಯಲು ಹೊರಟವರು, ವಿಮುಖಳಾಗಿ ಬದುಕಿಗೆ ಶರಣಾಗತಳಾಗುತ್ತಿದ್ದಾಳೆ, ಅಜ್ಜಿಯಂತೆ: ರಿಯಾಕ್ಷನರಿಯಾಗಿ, ಬದುಕನ್ನು 'ಹೊಗು'ತ್ತಿದ್ದಾಳೆ, 'ಒಳಹೊಗು'ತ್ತಿದ್ದಾಳೆ; ಸುಮ್ಮನೆ ತೂರುತ್ತಿದ್ದಾಳೆ, ಕಣ್ಣು ಮುಚ್ಚಿಕೊಂಡು—ಅದನ್ನು ಬಗೆಯದೆ, ಅಗೆದು ನೋಡದೆ, ಅರಿಯದೆ, ತಿಳಿಯದೆ—'ಅನುಮಾನಕ್ಕೆಡೆಕೊಡದೆ !'

ಸಂಪ್ರದಾಯ "ಅಜ್ಜಿ"ಯಾಗಿ ಹೆಣ್ಣಿನ ಮನಸ್ಸನ್ನು ಪರಿವರ್ತಿಸುತ್ತಿದೆ—ಕುಟ್ಟಿ ಕುಟ್ಟಿ ಬದಲಿಸುತ್ತಿದೆ:

ಮನಸ್ಸಿನಲ್ಲಿ ಕುಟ್ಟುತ್ತಾ ಕೂರುತ್ತಾಳೆ ನನ್ನಜ್ಜಿ

ಮಾನವ ಸಹಜ ಸಂವೇದನೆಗಳ, ಹೆಣ್ಣಿನ ವ್ಯಕ್ತಿತ್ವ ಸ್ವಂತಿಕೆಯ, ಪ್ರಜ್ಞಾ ವಿಶೇಷಳಾದ ಹೆಣ್ಣು ಬದುಕೆಂಬುದೇನು ಎಂದು ಬಗೆಯಲು, ಅಗೆದು ಶೋಧಿಸಿ ತಿಳಿಯಲು, ಅರಿಯಲು, ಪ್ರಯತ್ನಿಸಿ ವಿಫಲಳಾಗಿ ಸೋತು, ಸಾಕಾಗಿ—ಆ ಸೋಲಿನ ಸಾಕಾಗುವಿಕೆಯ ಸಂಕೇತವಾಗಿ ದೇಹಸ್ವಾಸ್ತ್ಯವನ್ನು ಕಳೆದುಕೊಂಡು, ಅನಾರೋಗ್ಯ ಳಾಗಿ—'ಅಜ್ಜಿ'ಯನ್ನು ಶರಣು ಹೋಗುತ್ತಾಳೆ, ಸಂಪ್ರದಾಯದ ಸರಪಳಿಗೆ "ಕೊಂಡಿ" ಯಾಗಲು ಹವಣಿಸುತ್ತಾಳೆ—ತನ್ನನ್ನು ತಾನು ಬಹಿರಂಗವಾಗಿ ವಂಚಿಸಿಕೊಳ್ಳುತ್ತಾಳೆ. ಸಂಪ್ರದಾಯದ 'ಕುಟ್ಟಿ'ಗೆ (hammeringಗೆ)—ಅದಕ್ಕೆ ಅಜ್ಜಿಯನ್ನು 'ಕುಟುಕಲು ಅಜ್ಜಿ' ಎನ್ನುತ್ತೇವೆ—ಸೋತು ಬಂಧಿತಳಾಗುತ್ತಾಳೆ ಹೆಣ್ಣು.

ಕವನದ ಹವಣಿಕೆಯೇ ಈ ಪ್ರತಿಗಾಮಿ ಧೋರಣೆಯನ್ನು, ವಿಫಲತೆ, ಸೋಲನ್ನು, ಉದ್ದಕ್ಕೂ ಧ್ವನಿಸುತ್ತದೆ–ಷುರಿವಿನಲ್ಲೇ ಅದರ, ರಿಯಾಕ್ಷನರೀ ಮನೋಭಾವದ ಹಿಮ್ಮೆಟ್ಟು ಇದೆ.

ಯುಗಾದಿ ಬಂದಾಗಲೆಲ್ಲಾ ಆಗುತ್ತದೆ
**ಮನಸ್ಸು ಹಿಮ್ಮುಖ** (ಒತ್ತು ನನ್ನದು)

ದುರಂತವೇನೆಂದರೆ, ಹೆಣ್ಣು **ಶಶಿಕಲಾ ವಸ್ತ್ರದರ ಮೇಣದ ಬತ್ತಿಯ** ಹೆಣ್ಣಿನ ಎಚ್ಚರವನ್ನು ಹತ್ತಿಕ್ಕುತ್ತಿದ್ದಾಳೆ:

ನಾ ನೋಡು
ಅಜ್ಜ ಹೊಲಿದಿಟ್ಟ
ಕೌದಿಯ ಸುರುಳಿಯಲ್ಲಿ

..................

..................

.... ........ .......

ಹೆಪ್ಪುಗಡುತ್ತಿದ್ದೇನೆ

**ಬದುಕು ಬಗೆಯಲಾಟ**ದ ಹೆಣ್ಣು ಹೆಪ್ಪುಗಡುತ್ತಿದ್ದಾಳೆ–ಕೌದಿಯ ಸುರುಳಿಯ ಬೆಚ್ಚನೆಗೆ ಕೌದಿಯ ಹೊಲಿಗೆ ಹೊಲಿಗೆಗಳ ಸಂರಕ್ಷಣೆಗೆ, ಸಂಪ್ರದಾಯದ ಸರಪಳಿಯ ಬಂಧನಕ್ಕೆ. ಸಾವಿನ ನೆಮ್ಮದಿಗೆ. ತನ್ನನ್ನು ತಾನು ಒಪ್ಪಿಸಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾಳೆ: ಆದರೆ ಅವಳ ವೈಯಕ್ತಿಕ ಅಂತರ್ಯ, ಹೆಣ್ಣು ತುಯ್ತ, ಆ ಬಂದಿಗೆ, ಖೈದಿಯಾಗುವಿಕೆಗೆ ಗುಪ್ತವಾಗಿಯೇ ಪ್ರತಿಭಟಿಸುತ್ತಿದೆ: ಅದಕ್ಕೇ ಹೆಣ್ಣಿನ ಪ್ರಶ್ನೆ ಉಳಿದು ಬಿಡುತ್ತದೆ:

ಕೊಂಡಿ ಕಳಕೊಳ್ಳದ ಅಜ್ಜಿ
ನನಗೇಕೆ ಆಗಲಿಲ್ಲ ಕೊಂಡಿ ?

ಇದೀಗ ಈ ಅದ್ಭುತ ಕವನದ ದಾರುಣ್ಯ : ದುಃಖ. ಕವನ ಒಂದು ಅನನ್ಯವಾದ ಅಜ್ಜಿಯ ಆರ್ಕಿಟೈಪ್ ಚಿತ್ರಣ: ಅಜ್ಜಿಯಾಗಿ ಹೆಣ್ಣು:

ಒಂದೊಂದು ಯುಗಾದಿಗೂ ಬದುಕಿದಳು
ಸೊಕ್ಕಿ. ಹಿಗ್ಗಿ, ಬೀಗಿದಳು, ಮಾಗಿದಳು, ಕಳೆತಳು
ಸದ್ದಿಲ್ಲದೇ ಕಳಚಿಕೊಂಡಳು ತೊಟ್ಟು ಕಚ್ಚಿಕೊಂಡಿರುವಾಗಲೇ

ಎಂತಹ ಭವ್ಯ ಸಾಫಲ್ಯತೆಯ ಸಂತೃಪ್ತ ಸಾಕ್ಷಾತ್ಕರಣ ! ಅಜ್ಜಿ ಕಣ್ಣು ಮುಚ್ಚಿ, ಕಿವಿ ಮುಚ್ಚಿ, ಬಾಯಿ ಮುಚ್ಚಿ 'ಬದುಕ ಹೊಕ್ಕವಳು'–ಬದುಕ ಬಗೆಯಲು ಹೊರಟ ಎಚ್ಚರದ ಹೆಣ್ಣಲ್ಲ: ಅವಳಷ್ಟಕ್ಕೆ, ಸಂಕೋಲೆಯ ನ್ನೇ ಆಭರಣವಾಗಿಸಿಕೊಂಡು, ಬಂಧನವನ್ನೇ ಭರಿಸಿ ವೈಭವದಲ್ಲಿ ಮೆರೆದವಳು, ಅವಳು: ಕಾಲ್ಗಡಗಕ್ಕೆ ಗೆಜ್ಜೆ ಕುಣಿದವಳು– 'ಅನುಮಾನಕ್ಕೆ ಎಡೆಕೊಡದೆ ಎಡೆ ತಿಂದ', 'ಸಂತೃಪ್ತ ತೇಗಿ'ನವಳು–'ಎಡೆ' ಎನ್ನುವ 'ಸಂಶಯ'ವನ್ನೇ, 'ಅವಕಾಶ'ವನ್ನೇ, 'ಪ್ರಸಾದ'ವನ್ನಾಗಿಸಿಕೊಂಡು. ತಿಂದು 'ತೇಗಿದ' ವಳು–ಸಂತೃಪ್ತಳು–ಕಣ್ಣು–ಮೂಗು–ಬಾಯಿ ಮುಚ್ಚಿದ ಸಂಪೂರ್ಣ 'ಶರಣ'ಳು. ಇಲ್ಲಿ ನೋಡಿ, 'ಮಾಗಿದಳು, ಕಳೆತಳು' ಎನ್ನುವಲ್ಲಿ ಮಾಗುವುದೇ ಕಳೆತ. ಅಲ್ಲವೇ ? ಅಂದಾಗ ಮಾಗಿದ ಮೇಲೆ ಆಗುವ ಕ್ರಿಯೆ ಕಳೆತವಲ್ಲ–ಕೊಳೆತ: ಅಂದರೆ ಈ 'ಕೊಳೆತ'ವೇ 'ಕಳೆತ'ದ ಭ್ರಮಣೆಯಾಗಿರಬೇಕಲ್ಲವೇ ?

ಈ "ಅಜ್ಜಿ" ಒಂದು ವಿಶೇಷ ರೀತಿಯಲ್ಲಿ ಈ ಮೂರು ಕವನಗಳ ಹೆಣ್ಣನ್ನು ಆಕರ್ಷಿಸುವವಳು- ಹಾಂಟ್ ಮಾಡುವ 'ಭೂತ' (ಎರಡೂ ಅರ್ಥದಲ್ಲಿ). ಮೂರು ಕವಿಗಳೂ–"ಕವಯತ್ರಿ"ಗಳು ಎಂದು ಕವಿಮೇಳದಲ್ಲಿ ಅವರನ್ನು ಕರೆಯಲಾಗಿದೆ; ಆ 'ಅಪಭ್ರಂಶವನ್ನು' ತೆಗೆದು ಹಾಕಿ ನಾವು ಹೆಣ್ಣು ಕವಿಗಳನ್ನು ಇಂಗ್ಲೀಷಿನಲ್ಲೂ ಪ್ರೊಯೆಟ್ ಎಂತಲೇ ಕರೆಯುವ ಹಾಗೆ, ಕವಿಗಳೆಂದೇ ಕರೆಯೋಣ–"ಅಜ್ಜಿ"ಯನ್ನು ಒಂದೆಡೆಯಲ್ಲಿ ಮೆಚ್ಚಿದವರೇ, ಸಾರ್ಥಕ ಜೀವಿ ಎಂದುಕೊಂಡವರೇ: ಆದಾಗ್ಯೂ ಅವಳು ಒಂದು ರೀತಿಯ ಬಲಿಪಶು, ಪಾಪದವಳು, ಅಮಾಯಕಳು ಎನ್ನುವ ಪರಿಕಲ್ಪನೆ

ಅನುಕಂಪ, pity ಉಳ್ಳವರೂ ಕೂಡ: "ಅಜ್ಜಿ"ಯ ಬಗ್ಗೆ ಪ್ರೀತಿ-ಭಯಗಳ love-hateನ ದ್ವಂದ್ವದವರು. ನೋಡಿ ಹೇಗೆ "ಅಜ್ಜಿ", 'ಬಿರುಗುವ ಗೋರಿಗಳು' ಕವನದಲ್ಲಿ ಭಯಾನಕದ ಭೀಭತ್ಸದ 'ಅರೆ ಮುದುಕಿ'; 'ಸ್ಪಂಜು'ನಲ್ಲಿ 'ಕೈಚೆಲ್ಲಿ ಮಲಗಿದ' ನಿರಾಶಾ ಪ್ರೇತ; 'ಬದುಕು ಬಗೆಯಾಟ'ದ ಗಂಟುಬಿದ್ದ ಶನಿ 'ಕುಟ್ಟುತ್ತಾ ಕೂರು'. 'ಕೊಂಡಿ'; 'ಮೇಣಬತ್ತಿ'ಯ ಹಾವಿನಂತೆ ಮೈಗೆ ಸುರುಳಿ ಸುತ್ತಿಕೊಂಡ 'ಕೌದಿಯ ಸುರುಳಿ'. ಹೀಗೆ ಈ ಕವನಗಳೆಲ್ಲವುಗಳ 'ಅಜ್ಜಿ', ಹೆಣ್ಣಿನ, ನಡುವಯಸ್ಕಳ, ಮಧ್ಯಮ ವಯಸ್ಕ ಹೆಣ್ಣಿನ 'ಭೂತ': 'ದೇವತೆ-ದೆವ್ವ'.

ಸರ್ವಜ್ಞನ "ಅಜ್ಜಿಯೇ ಲೇಸು" ಎನ್ನುವ ಉಕ್ತಿಯ, ನಂಬುಗೆಯ ವಿರುದ್ಧದ ಬಂಡಾಯವೇ ಈ ಕವನಗಳ ಇಂಗಿತವೆನ್ನಬೇಕು. ಅಜ್ಜಿ **ಆದರ್ಶವಲ್ಲ, ಎಚ್ಚರಿಕೆ** ಎನ್ನುವುದೇ ಈ ಕವನಗಳ ಹೆಣ್ಣಿನ ಅಂತರಾಳ, ಅನುಕಂಪ, ದುಃಖ: "ಎಂಥದೋ ನೋವು". ●

---

## ಒಡಲ ದನಿಗೆ ಮಿಡಿದವರು

(4ನೇ ಪುಟದಿಂದ)

○ ನೀವು ಸಂಪಾದಕೀಯದ ಮೊದಲ ಸಾಲಲ್ಲಿ ಬರೆದ ಮಾತು 'ಸಾಹಿತ್ಯ ಪತ್ರಿಕೆ'ಯ ಬಗೆಗೆ ಎಲ್ಲರಿಗೂ ಇರುವ ಅಭಿಪ್ರಾಯವೆ! ಆ ಮಾತನ್ನು ನೀವು ಸುಳ್ಳು ಮಾಡಬಲ್ಲಿರಿ ಎಂಬ ವಿಶ್ವಾಸ ನನಗಿದೆ. ಕೆ ವಿಜಯಲಕ್ಷ್ಮಿ ಅವರ 'ನನ್ನ ಹೃದಯವಂತನಿಗೆ' ಮತ್ತು ರಾ. ಮೂರ್ತಿ ಅವರ 'ಬಂಡಾಯಗಾರ್ತಿ ಕನಲಿದ್ದು' ನಾ ಮೆಚ್ಚಿಕೊಂಡ ಕವನಗಳು. ವಿಚಾರವಾದಿ ಡಾ॥ ಅಬ್ರಹಾಂ ಕೋವೂರ್ ಅವರ ಪರಿಚಯ ಲೇಖನ ಉತ್ತಮವಾಗಿದೆ.

ಕುರುಡುಪದವು-670322 (ಕೇರಳ ರಾಜ್ಯ) ಗೋವಿಂದ ಭಟ್ ಕೆ.

○ ಸಾಹಿತ್ಯಾಭ್ಯಾಸಕ್ಕೆ ಉಪಯುಕ್ತ ಲೇಖನಗಳೂ ಕವನಗಳೂ ಇವೆ. 'ಅನ್ವೇಷಣೆ' ಸಾಹಿತ್ಯಾಭ್ಯಾಸಿಗಳಿಗೆ ಉಪಯುಕ್ತ ಮಾಹಿತಿಯನ್ನೊದಗಿಸಲಿ.

ಕೊಟ್ಟೂರು-583134 ಕುಂ. ವೀರಭದ್ರಪ್ಪ

○ ನಿಮ್ಮ ಸಾಗರ ಗೆಲ್ಲುವ ಸಾಹಸಕ್ಕೆ ನಾವು ಹರಿಗೋಲಾಗುತ್ತೇವೆ. ಪ್ರಥಮ ಸಂಚಿಕೆ ಇಷ್ಟೊಂದು ಮಹತ್ವವಾಗಿ ಜನಿಸಿದ್ದು ಕಂಡು ಸಂತಸವಾಯಿತು.

ಕಿಕ್ಕೇರಿ (ಮಂಡ್ಯ ಜಿಲ್ಲೆ) ಶ್ರೀರಾಮ ಬಿದರಕೋಟೆ

○ ಪತ್ರಿಕೆ ಅಂದವಾಗಿ ಹೊರಬಂದಿದೆ, ನೀವು ನಮ್ಮ ಹಾಗೂ ಊರಿನ ಬಗೆಗೆ

ಮನಸ್ಸು ತುಂಬಿ ಬರೆದಿದ್ದೀರಿ. ಧನ್ಯವಾದಗಳು. ಪತ್ರಿಕೆ ನಿರ್ಭಿಡೆಯಾಗಿ, ಯಾವ ಕಟ್ಟೆಗೂ, ಪಕ್ಷಕ್ಕೂ, ಆಮಿಷಗಳಿಗೂ ಒಳಗಾಗದೇ ಬರಲಿ.

ರಾಯಚೂರು-584101 ಎಚ್. ಎಸ್. ಮುಕ್ತಾಯಕ್ಕ

o ಪತ್ರಿಕೆಯೊಳಗಿನ contents ನಾನು ನಿರೀಕ್ಷಿಸಿದ್ದಾದಕ್ಕಿಂತ ಉತ್ತಮವಾಗಿದೆ.

ಬೆಂಗಳೂರು-52 ಎಸ್. ಬಿ. ಉದಯಕುಮಾರ್ ('ಐಕ್ಯರಂಗ'ದ ಪರವಾಗಿ)

o ರಾ. ಮೂರ್ತಿ ಅವರ 'ರಾಮರಾಜ್ಯದ ಪ್ರಜೆಗೆ' ಒಳ್ಳೆಯ ಕವನ. ಬಂಡವಾಳಶಾಹಿ ಸಮಾಜದಲ್ಲಿ ಜನಸಾಮಾನ್ಯನ ಪ್ರಸ್ತುತ ಸ್ಥಿತಿ, ಅವನ ಭವಿಷ್ಯ ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಧನ್ಯವಾದಗಳು. ವೈಚಾರಿಕ ವಿಚಾರಗಳ 'ಅನ್ವೇಷಣೆ' ದೀರ್ಘವಾಗಿ ಬಾಳಲಿ.

ಬೊಮ್ಮಸಂದ್ರ-562158 ಕು॥ ಡಿ. ರಾಧ ('ಅನ್ವೇಷಣೆ' ಅಭಿಮಾನಿ!)

o ಸಂಚಿಕೆಯಲ್ಲಿ ವೈವಿಧ್ಯತೆಯಿದೆ. ಕೆಲವೇ ನಿಯಮಗಳಿಗೆ ಜೋತುಬಿದ್ದು ಹಳಸಲು ಆಗದಿರಲಿ, ಮುಕ್ತ ವೇದಿಕೆ ಇರಲಿ.

ಹೊಸಪೇಟೆ-583201 ಅರವಿಂದ ನಡಹಳ್ಳಿ

o ಕವನಗಳ ಆಯ್ಕೆಯಲ್ಲಿ ಇಷ್ಟೇ ಬಿಗುವನ್ನು ನೀವು ಮುಂದುವರೆಸಿಕೊಂಡು ಹೋದಲ್ಲಿ ಪ್ರಕಟಗೊಂಡ ಕೆಲವಾದರೂ ಕಾವ್ಯವೆನಿಸಿಕೊಂಡಾವು. ನಿಮ್ಮ ಡೈರಿ (ಸೃಷ್ಟಿ) ಹಾಗೂ 'ಸಾಹಿತಿ–ಸಾಹಿತ್ಯ ಸುದ್ದಿ' ಅಂಕಣಗಳು ನಿರ್ದಿಷ್ಟ ಅಂಕಣಗಳಾಗಿ ಮುಂದುವರೆಯಲಿ.

ಹೊಸಪೇಟೆ–583201 ಹಿ. ಮ. ಗುರುಬಸವರಾಜ

o ಪ್ರಥಮ ಸಂಚಿಕೆಯಲ್ಲಿ ವಿಚಾರಪೂರ್ಣ ಲೇಖನಗಳಿವೆ. ಯುವ ಪ್ರತಿಭೆಗೆ ಆದ್ಯತೆ ಇರಲಿ.

ಹಾಸನ-573201 ಹಾಡ್ಲಳ್ಳಿ ನಾಗರಾಜ್, ಎಂ. ಎಂ. ಮಹಾಂತೇಶ್

o ಪತ್ರಿಕೆ ಈಗ ಬರುತ್ತಿರುವ ಸಾಹಿತ್ಯ ಪತ್ರಿಕೆಗಳಿಗಿಂತ ಭಿನ್ನವಾಗಿರುವಂತೆ ಪ್ರಯತ್ನಿಸಿ. ಮೊದಲ ಸಂಚಿಕೆಯ ಶೈಲಿ ಕಂಡಾಗ ಸಂಕ್ರಮಣ–ಶೂದ್ರದ ಪ್ರಭಾವ ತುಸು ಹೆಚ್ಚಾಯಿತೇನೋ ಅನ್ನಿಸಿತು.

ಮಂಗಳೂರು ಎಚ್. ದುಂಡಿರಾಜ್

o ನಿಮ್ಮ ಸಂಪಾದಕೀಯ ನೇರ–ಸರಳ. 'ಚಿಕವೀರರಾಜೇಂದ್ರ'ದ ಬಗೆಗಿನ ವಿಶ್ಲೇಷಣೆ ಸಂಚಿಕೆಯನ್ನು ಸಂಗ್ರಹ ಯೋಗ್ಯವಾಗಿಸಿದೆ.

ಬೆಳಗಾಂ-590002 ಆರ್. ಎಸ್. ವೆಂಕಟರಾವ್

(ಪ್ರಥಮ ಸಂಚಿಕೆ ಮೆಚ್ಚಿ ನೂರಾರು ಪತ್ರಗಳು ಬಂದಿವೆ. ಮುಖ್ಯ ಪತ್ರಗಳನ್ನಷ್ಟೇ ಆಯ್ಕೆ ಮಾಡಿ ಪ್ರಕಟಿಸಲಾಗಿದೆ. ಮೆಚ್ಚಿ ಬರೆದ ಎಲ್ಲರಿಗೂ ಕೃತಜ್ಞತೆಗಳು. ಹಾಗೆಯೇ **ಚಂದಾ ಕಳುಹಿಸುವುದನ್ನು ಮರೆಯಬೇಡಿ.** —ಸಂಪಾದಕ)

# ಎಂ. ಇ. ಎಸ್. ಕಾಲೇಜಿನಲ್ಲಿ ಎರಡು ನಾಟಕಗಳು

ಒಂದು ಸಾಮಾನ್ಯ ಮಾತು :

ಬೆಂಗಳೂರಿನಲ್ಲಿ ನಡೆಯುವ ರಂಗಭೂಮಿ ಚಟುವಟಿಕೆಗಳಿಗೆ ಒಂದಲ್ಲಾ ಒಂದು ರೀತಿ ಪ್ರೋತ್ಸಾಹ ಇದ್ದೇ ಇರುತ್ತದೆ. ಅದು ಕಲಾಕ್ಷೇತ್ರದಿಂದ ಹೊರಗೆ ನಡೆದರೂ ಕೆಲವೊಂದು ಪ್ರೇಕ್ಷಕರನ್ನಂತೂ (ಹೊಸಬರನ್ನೂ ಒಳಗೊಂಡು) ಪಡೆಯುತ್ತದೆ.

ಇನ್ನೊಂದು ವಿಷಯವನ್ನೂ ಕೆಲವರು ಬಲವಾಗಿ ನಂಬಿದ್ದಾರೆ: ಕಲಾಕ್ಷೇತ್ರದ ನಾಟಕಗಳು ತನ್ನದೇ ಆದ ಪ್ರೇಕ್ಷಕ ವರ್ಗವನ್ನು; ಅಂಥ ಒಂದು ಸಮೂಹವನ್ನು ಪಡೆದಿರುತ್ತವೆಯೆಂಬುದು. (ಇದು ಕೆಲವೊಮ್ಮೆ ನಿಜವೂ ಕೂಡ).

ಕಲಾಕ್ಷೇತ್ರ ಬಿಟ್ಟು ನಗರದ ಯಾವುದೇ ಬಡಾವಣೆಯಲ್ಲಿ ಪ್ರದರ್ಶನ ಕಂಡ ನಾಟಕಗಳು ಅಷ್ಟಿಷ್ಟು ಯಶಸ್ವಿಯಾಗಿ, ಪ್ರೇಕ್ಷಕರ ದೃಷ್ಟಿಯಲ್ಲಿ 'ಪರವಾಗಿಲ್ಲ' ಅನ್ನಿಸಿ ಕೊಂಡವು ಪ್ರಚಾರ ದೃಷ್ಟಿಯಿಂದ ಕಡಿಮೆ ಆದರೂ, ಪ್ರದರ್ಶನ ಕೊಟ್ಟ ದೃಷ್ಟಿಯಿಂದ ಒಳ್ಳೆಯ ಸಾಧನೆಯೆಂದೇ ಮೆಚ್ಚಿಗೆ ಪಡೆದಿರುತ್ತವೆ.

ಇಂಥ ನಗರಗಳಲ್ಲಿ ಎಲ್ಲೇ ಚಟುವಟಿಕೆ ನಡೆದರೂ (ಪ್ರದರ್ಶನಕ್ಕೆ ಆಯ್ಕೆ ಮಾಡಿ ಕೊಂಡ ವಸ್ತು ಗೌಣ) ಅಭಿನಯಕ್ಕೆ, ಪಾತ್ರವರ್ಗಕ್ಕೆ ತಕ್ಕಂಥ ಕಲಾವಿದರ ಕೊರತೆ ಅಷ್ಟಾಗಿ ಎದ್ದು ಕಾಣುವುದಿಲ್ಲ. ಇಲ್ಲಿ ನಾಟಕವೊಂದನ್ನು ನಿರ್ದೇಶಿಸುವವನ 'ಸಾಮರ್ಥ್ಯ'ದ ಮೇಲೆ ಕಲಾವಿದರು ಹುಟ್ಟುತ್ತಾರೆ, ಬೆಳೆಯುತ್ತಾರೆ. ನನ್ನಂಥ ಒಬ್ಬ ಸಾಮಾನ್ಯ ಪ್ರೇಕ್ಷಕನ ದೃಷ್ಟಿಯಲ್ಲೂ ಕಲಾವಿದರ ಅಭಿನಯದ ಬಗ್ಗೆ ಒಳ್ಳೆಯ ಭಾವನೆ ಮೂಡಲೂ ಸಾಧ್ಯವಾಗುತ್ತದೆ. ಅಭಿನಯ ಕಳಪೆ (ಕೃತಕ ಇತ್ಯಾದಿ) ಆದಾಗ ಆ ನಿರ್ದೇಶಕನ ಸಾಮರ್ಥ್ಯ ಇಲ್ಲಿ ಗೇಲಿಗೆ ಅವಕಾಶ ಕೂಡ ಆಗುವುದುಂಟು.

ಈ ಮೇಲಿನ ಒಂದೆರಡು ಪೀಠಿಕೆಯ ಮಾತುಗಳನ್ನು ಇಲ್ಲಿ ಹೇಳಿದ್ದರ ಉದ್ದೇಶ ಮತ್ತು ಸಂದರ್ಭ: ನಗರದ ಮಲ್ಲೇಶ್ವರ ಎಂ.ಇ ಎಸ್. ಕಾಲೇಜಿನಲ್ಲಿ ರಂಗ ತರಬೇತಿ ಶಿಬಿರದಲ್ಲಿ ತರಬೇತಿ ಪಡೆದ ವಿದ್ಯಾರ್ಥಿ ವೃಂದದವರು ಅಭಿನಯಿಸಿದ ಎರಡು ನಾಟಕಗಳನ್ನು ಮುಖ್ಯ ದೃಷ್ಟಿಯಲ್ಲಿಟ್ಟುಕೊಂಡದ್ದು.

ಯಕ್ಷಗಾನ ಬಡಗುತಿಟ್ಟು ಶೈಲಿಯಲ್ಲಿನ ನಟನ ನಾಟ್ಯಾಂಶಗಳ ಬಗ್ಗೆ ಅಧ್ಯಯನ ನಡೆಸುತ್ತಿರುವ, ದೆಹಲಿಯ ಎನ್.ಎಸ್ ಡಿ. ತರಬೇತಿ ಪಡೆದ ನಟ-ನಿರ್ದೇಶಕ ಗೋಪಾಲಕೃಷ್ಣ ನಾಯರಿ, ಭಾಸನ ಸಂಸ್ಕೃತ ನಾಟಕ 'ಧೂರ್ತವಾಕ್ಯ'ವನ್ನು (ಕನ್ನಡಕ್ಕೆ: ಎಲ್. ಗುಂಡಪ್ಪ) ನಿರ್ದೇಶಿಸಿ ವಿದ್ಯಾರ್ಥಿಗಳ ಸುಪ್ತ ಪ್ರತಿಭೆಯನ್ನು ಹೊರ ಚೆಲ್ಲಲು ಯಶಸ್ವಿಯಾದರು.

ನಾಟಕದ ಪ್ರದರ್ಶನಕ್ಕೆ ಆಯ್ಕೆ ಮಾಡಿಕೊಂಡ ವಸ್ತುವಿನ ಬಗ್ಗೆ ಕೆಲವೊಂದು

ಪ್ರಶ್ನೆಗಳು ಏಳುವುದಾದರೂ; ನಿರ್ದೇಶಕನ ದೃಷ್ಟಿಯಲ್ಲಿ 'ಯಕ್ಷಗಾನ ನಾಟ್ಯ'ದ ಅಂಶ ಹೆಚ್ಚು ಕೆಲಸ ಮಾಡುತ್ತಿರುವುದನ್ನು ಗುರ್ತಿಸಿಕೊಂಡು 'ವಿದ್ಯಾರ್ಥಿಗಳಲ್ಲವೆ ಅಭಿನಯಿಸಿದ್ದು' ಎಂಬ ಒಂದು ರಿಯಾಯ್ತಿ ತೋರಿಸಿ ಮಾತಾಡಬಹುದು; ಮೆಚ್ಚಿಗೆ ಸೂಚಿಸಬಹುದು. ಇಡೀ ನಾಟಕ ಯಕ್ಷಗಾನ ಶೈಲಿಯದ್ದಾದರೂ (ನಿರ್ದೇಶಕ ಅಳವಡಿಸಿಕೊಂಡ ರೀತಿ ಇರಬಹುದೆ?) ಏಕತಾಳ ಮತ್ತು ಒಂದೇ ಚಂಡೆ ವಾದನದಿಂದ ವಿದ್ಯಾರ್ಥಿಗಳು ಹಾಕುತ್ತಿದ್ದ ಕೆಲವು ತಪ್ಪಿನ ಹೆಜ್ಜೆಗಳು ಸಹಜವಾಗೇ ಗೋಚರಿಸಿದವು. ಸೂತ್ರಧಾರ ಮತ್ತು ಕೃಷ್ಣನಾಗಿ ಸುಧಾಳ ಅಭಿನಯ ಮೆಚ್ಚಿಗೆ ಪಡೆದರೆ; ದುರ್ಯೋಧನನಾಗಿ ರಘು ಪರವಾಗಿಲ್ಲ ಅನ್ನಿಸಿತು. ಈ ಹುಡುಗ ತನ್ನ ಪಾತ್ರದ ಬಗ್ಗೆ ಹೆಚ್ಚು ತೊಡಗಿಸಿಕೊಂಡರೆ ಒಳ್ಳೆಯ ಪ್ರತಿಭೆಯನ್ನು ಹೊರ ಸೂಚಿಸಬಹುದು. ಸುಧಾ ಕೂಡ ತನ್ನ ಹಾವ-ಭಾವಗಳನ್ನು (ಕಣ್ಣಲ್ಲಿ, ಮುಖದಲ್ಲಿ ತೋರಿಸುತ್ತಿದ್ದ expression) ಸಂದರ್ಭಕ್ಕೆ ತಕ್ಕಂತೆ ಉತ್ತಮವಾಗೇ ನೀಡಿದ್ದು ಮೆಚ್ಚುವ ಅಂಶ.

o o o

ಎರಡನೇ ನಾಟಕ ಪ್ರೊ॥ ಬಿ. ಚಂದ್ರಶೇಖರ್ ನಿರ್ದೇಶಿಸಿದ 'ಬಿರುದಂತೆಂಬರ ಗಂಡ' (ಏಕಾಂಕ ನಾಟಕ). ಕರಪತ್ರದಲ್ಲಿ ಒಂದು ವಾಕ್ಯವಿದೆ: '.....ಇದರಲ್ಲಿ ಬರುವ ಸಾಮಾಜಿಕ ಅಂಶಗಳು ಐತಿಹಾಸಿವಾಗಿ ಅಧಿಕೃತ ಆಗಿರುವಂತೆ ರಾಜಕೀಯ ಅಂಶಗಳು ಇಂದಿಗೂ ಪ್ರಸ್ತುತ'.

ಪ್ರೇಕ್ಷಕರಿಗೆ ಇಡೀ ನಾಟಕ ಕಿರಿಕಿರಿ ಉಂಟು ಮಾಡಿದ್ದು ಇಂದಿನ ಯಾವುದೇ ಸಾಮಾಜಿಕ ಅಂಶಗಳಿಗೂ ಪ್ರಸ್ತುತವಾಗದೇ ತನ್ನ ಸೋಲನ್ನು ಕಂಡುಕೊಂಡು ಮೇಲಿನ ಮಾತುಗಳನ್ನು ಸುಳ್ಳಾಗಿಸಿತು. ಸಂತೆಯಂತೆ ನೆರೆಯುವ ಪಾತ್ರ ವರ್ಗಗಳು ಒಂದೆರಡು ಮಾತು ಒಪ್ಪಿಸಿ ಗೊಂಬೆಗಳಂತೆ ನಿಂತಿದ್ದುದು: ಬಾಯಿಪಾಠವನ್ನು ತಪ್ಪಿ ಹೇಳುತ್ತಿದ್ದುದೂ ಗೋಚರವಾಯಿತು. ಸಾಕಷ್ಟು ಸಂಖ್ಯೆಯಲ್ಲೇ ಇದ್ದ ಪ್ರೇಕ್ಷಕರಿಗೆ ಮಾತುಗಳು ತಲುಪದೇ ಇಬ್ಬರ ನಡುವಿನ ಗುಟ್ಟಾದ ಮಾತುಗಳನ್ನು ಹೇಳಿಕೊಂಡ ಅನುಭವ ಹಲವೊಮ್ಮೆ ಆದರೂ, ತಾಳ್ಮೆಯಿಂದ ಕಾಲೇಜಿನ ವಿದ್ಯಾರ್ಥಿಗಳೂ. ಪ್ರೇಕ್ಷಕರೂ ಕೂತಿದ್ದಷ್ಟೇ ಮೆಚ್ಚಬೇಕಾದ ಅಂಶ. ಬಿ.ಸಿ. ಅವರಂಥ ಹಿರಿಯ ನಿರ್ದೇಶಕರಿಂದ ನಾನಂತೂ ಇಂಥ ನಾಟಕ ನಿರೀಕ್ಷಿಸಿರಲಿಲ್ಲ.

ಎಂ.ಇ ಎಸ್. ಕಾಲೇಜಿನ ರಂಗ ತರಬೇತಿ ಶಿಬಿರ ಕ್ರಿಯಾತ್ಮಕ ಚಟುವಟಿಕೆಯೊಂದನ್ನು ಮಾಡಿದ್ದರ ದಾಖಲೆಯನ್ನು ಒದಗಿಸಿದ್ದರಿಂದ; ಇಂಥ ಪ್ರದರ್ಶನಗಳು ಯಾವುದೇ ಕಾಲೇಜಿನಲ್ಲಾದರೂ ಸ್ವಾಗತಾರ್ಹ.

—ಸಂಪಾದಕ

# ರಂಗನೋಟದ ಕೆಲವು ಖಾಸಗಿ ಮಾತುಗಳು

ಹವ್ಯಾಸಿ ರಂಗಭೂಮಿಗೆ ಸಂಬಂಧಿಸಿದ ಚಟುವಟಿಕೆಗಳು ರಾಜಧಾನಿಯಲ್ಲಿ ಏನೇ ನಡೆದರೂ ಅವು ಪತ್ರಿಕೆಗಳ ಮೂಲಕ ಬೇಗ ಪ್ರಚಾರಕ್ಕೆ ಬಂದು ಸುದ್ದಿಯಾಗುತ್ತವೆ. ರಾಜಧಾನಿಯ ಹೊರಗೆ ಮತ್ತು ರಾಜ್ಯದ ಆಚೆ ನಡೆವ ಇಂಥ ಎಷ್ಟೋ ಚಟುವಟಿಕೆಗಳೂ ಸುದ್ದಿಯಾಗದೇ ಹೋಗುತ್ತವೆ. ಹೊಸ ಆಲೋಚನೆಯ ಜನಾಂಗ ಬೆಳೆದಂತೆ. ಸಾಹಿತ್ಯ ಮತ್ತು ರಂಗಭೂಮಿಗಳಲ್ಲಿ ಹೊಸ ಹೊಸ ಪ್ರಯೋಗಗಳೂ ನಡೆಯುತ್ತಿರುವುದು ಸಂತೋಷದ ವಿಷಯ.

ಬೆಂಗಳೂರಿನಲ್ಲಿ ನಡೆವ ಹವ್ಯಾಸಿ ರಂಗಭೂಮಿ ಚಟುವಟಿಕೆಗಳಿಗೆ ಪತ್ರಿಕೆಗಳೂ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿವೆ; ಇಲ್ಲಿರುವ ನಾಟಕ ಅಕಾಡೆಮಿಯೂ ಕೂಡ ಸ್ಥಳೀಯ ಕಲಾವಿದರನ್ನೇ ಅದರಲ್ಲೂ ಕಲಾಕ್ಷೇತ್ರದಲ್ಲೇ 'ಸುತ್ತು'ವ ವ್ಯಕ್ತಿಗಳನ್ನೇ ಹೆಚ್ಚು ಓಲೈಸಿ: ತನ್ನ ಕಾರಸ್ಥಾನವನ್ನು ಅಲ್ಲೇ ಬೆಳೆಸಿಕೊಳ್ಳುತ್ತಿದೆಯೆಂಬ ಆಪಾದನೆಯನ್ನು ನಾನು ರಂಗಭೂಮಿಯಿಂದ ದೂರ ನಿಂತು. ಒಬ್ಬ ಸಾಮಾನ್ಯ ವೀಕ್ಷಕನಾಗಿ ಗಮನಿಸುತ್ತ ಬಂದಿದ್ದೇನೆ.

ಈಗ ನಮ್ಮ ಪತ್ರಿಕೆಯೂ ಕೂಡ ಇಂಥ ಒಂದು ಕೂಗಿನಲ್ಲಿರುವ ಸತ್ಯದ ಬಗ್ಗೆ ಒರೆ ಹಚ್ಚುವ ಕೆಲಸ ಮಾಡುತ್ತದೆ. ಕೆಲವೊಮ್ಮೆ ನಾವು ರಾಜಧಾನಿಯ ಚಟುವಟಿಕೆಗಳಿಗೇ ಒತ್ತು ಕೊಟ್ಟು ಬರೆಯುವ ಪ್ರಮೇಯ ಬಂದರೂ ಹೊರಗಡೆ ರಂಗ ಚಟುವಟಿಕೆಗಳನ್ನಂತೂ ಕಡೆಗಣಿಸುವುದಿಲ್ಲ. ಈ ಮಾತನ್ನು ಇಲ್ಲಿ ಹೇಳುವಾಗ ಮೈಸೂರು, ದಾವಣಗೆರೆ, ಶಿವಮೊಗ್ಗ, ರಾಯಚೂರು, ಧಾರವಾಡಗಳ ಮಿತ್ರರು ಇಂಥ ವಿಚಾರವನ್ನು ಬಿಚ್ಚುಮನಸ್ಸಿನಿಂದ ಹೇಳಿಕೊಂಡದ್ದನ್ನು ನೆನಪಿಗೆ ತಂದುಕೊಂಡು ಬರೆಯುತ್ತಿರುವೆ.

## ಪ್ರತಿಮಾ ಸಭಾ : 'ನೀನಾಸಂ' ಗೆಳೆಯರು

'ರಂಗನೋಟ' ಖಂಡಿತಾ ರಾಜಧಾನಿ ಚಟುವಟಿಕೆಗಳಿಗಷ್ಟೇ ಸೀಮಿತವಲ್ಲ! ನಾನು ಇದೇ ತಿಂಗಳು ಪ್ರಾರಂಭದ ದಿನಗಳಲ್ಲಿ ಒಂದು ವಾರ ದಾವಣಗೆರೆಗೆ ಭೇಟಿ ಕೊಟ್ಟ ಸಂದರ್ಭದಲ್ಲಿ ಅಲ್ಲಿ ಕಂಡ ರಂಗಚಟುವಟಿಕೆ ಕುರಿತು ಹೇಳುವೆ :

'ಪ್ರತಿಮಾ ಸಭಾ' ಸುಮಾರು ಹದಿನಾಲ್ಕು ವರ್ಷಗಳಿಂದ ದಾವಣಗೆರೆಯಲ್ಲಿ ಹವ್ಯಾಸಿ ರಂಗಚಟುವಟಿಕೆಗಳನ್ನು ನಡೆಸುತ್ತಾ ಬಂದಿದೆ. ಕ್ರಿಯಾತ್ಮಕವಾಗಿ ಸದಾ ಚಟುವಟಿಕೆಯಲ್ಲಿರುವ ಈ ತಂಡ, ರಾಜಧಾನಿಯಲ್ಲಿ ಯಾವುದೇ ನಾಟಕ ಯಶಸ್ವಿಯಾದರೂ ಆ ತಂಡವನ್ನು ಆಹ್ವಾನಿಸಿ, ತನ್ನ ನೇತೃತ್ವದಲ್ಲಿ ಅದರ ಪ್ರಯೋಗ ನಡೆಸಿ ಪ್ರೋತ್ಸಾಹಿಸಿದ ಉದಾಹರಣೆಗಳೂ ಸಾಕಷ್ಟಿವೆ. (ಇವರ ಜೊತೆಗೆ ಸ್ಥಳೀಯ ಸಮುದಾಯದ ತಂಡವೂ ಪಾಲ್ಗೊಳ್ಳುವುದು) ಪ್ರೇಕ್ಷಕರಿಂದ ಮತ್ತು ಪತ್ರಿಕೆಗಳಿಂದ ಪ್ರಶಂಸೆ ಪಡೆದ ರಾಜಧಾನಿಯ ಬಹುತೇಕ ಪ್ರಯೋಗಗಳು ಇಲ್ಲಿನ ಆಸಕ್ತ ಪ್ರೇಕ್ಷಕರನ್ನೂ ರಂಜಿಸಿರುವುದುಂಟು.

'ಪ್ರತಿಮಾ ಸಭಾ' ತನ್ನದೇ ಆದ ಕಲಾವಿದರ ತಂಡವನ್ನು ಪಡೆದಿದೆ. ಇವರ ಯಶಸ್ವಿ ಪ್ರಯೋಗಗಳು—'ಸಂಕ್ರಾಂತಿ' ಮತ್ತು 'ಸಂತೆಯಲ್ಲಿ ನಿಂತ ಕಬೀರ'.

ಲಂಕೇಶ್ ರೀತಿ ಜಾಲಿಮಾರದಂಥ ಹುಡುಗ ಅಶೋಕ ಬಾದರದಿನ್ನಿ ಈಗಾಗಲೇ 'ಪ್ರತಿಮಾ ಸಭಾ' ತಂಡಕ್ಕೆ ತರಬೇತಿ ನೀಡಿದ್ದಾರೆ. ಈಗ ಒಂದೂವರೆ ತಿಂಗಳ ರಂಗ ತರಬೇತಿಯನ್ನು ಹೆಗ್ಗೋಡಿನ 'ನೀನಾಸಂ' ಜನ ಸ್ಪಂದನ ವತಿಯಿಂದ ನಡೆಸಲಾಗುತ್ತಿದೆ. ಈ ಸಂದರ್ಭದಲ್ಲಿ ಒಟ್ಟು ಐದು ನಾಟಕಗಳನ್ನು 'ನೀನಾಸಂ' ಮಿತ್ರರು ತರಬೇತುಗೊಳಿಸುತ್ತಿದ್ದಾರೆ.

ರಾಜ್ಯದ ಏಕೈಕ ಮತ್ತು ಪ್ರಥಮ ಗ್ರಾಮಾಂತರ ಹವ್ಯಾಸಿ ರಂಗಮಂದಿರ ಮತ್ತೂ ರಂಗತರಬೇತಿ ಕೇಂದ್ರ ಸಾಗರದ ಬಳಿಯ ಹೆಗ್ಗೋಡಿನಲ್ಲಿದ್ದು; ನೀನಾಸಂ ತಂಡ ಇತ್ತೀಚೆಗೆ ಯುವ ಪ್ರತಿಭೆಗಳನ್ನು ಅನ್ವೇಷಿಸಿ ಹೊಸ ಪ್ರಯೋಗಗಳನ್ನು ನಾಟಕ ಕ್ಷೇತ್ರಕ್ಕೆ ಕಾಣ್ಕೆ ಕೊಡುತ್ತಾಬಂದಿರುವುದು ಸಂತೋಷದ ವಿಷಯ. ಈಗ ಎನ್.ಎಸ್.ಡಿ. ತರಬೇತು ಪಡೆದ ಒಂದು ಪುಟ್ಟ ತಂಡವೇ ಅಲ್ಲಿ ಕೆಲಸ ಮಾಡುತ್ತಿದೆಯೆಂದು ಕೇಳಿದ್ದೇನೆ. ಕೆ. ವಿ. ಅಕ್ಷರ, ಚಿದಂಬರರಾವ್ ಜಂಬೆ, ಕೆ. ಜಿ. ಕೃಷ್ಣಮೂರ್ತಿ —ಮೂವರೂ ದಾವಣಗೆರೆಯಲ್ಲಿ ಒಂದೂವರೆ ತಿಂಗಳ ಕಾಲ ಪ್ರತಿಮಾ ಸಭಾವನ್ನು ಒಳಗೊಂಡಂತೆ ಬೇರೆ ಬೇರೆ ಕ್ಷೇತ್ರದ ಆಸಕ್ತ ಕಲಾವಿದರಿಗೆ ತರಬೇತಿ ಕೊಡುತ್ತಿದ್ದಾರೆ. ಬ್ರೆಕ್ಟ್‌ನ 'The Good Woman of Setzuan' (ಕನ್ನಡದಲ್ಲಿ : ಸಜ್ಜಾಪುರದ ಸಾಧ್ವಿ) ಯನ್ನು ಕೃಷ್ಣಮೂರ್ತಿ ಪ್ರತಿಮಾ ಸಭಾಕ್ಕೆ ತರಬೇತುಗೊಳಿಸುತ್ತಿದ್ದಾರೆ. ಅಕ್ಷರ ಸಿ.ಪಿ.ಐ. ಕಾರ್ಮಿಕರಿಗೆ ಬ್ರೆಕ್ಟ್‌ನ 'ತಾಯಿ'ಯನ್ನು; ಅನುಭವ ಮಂಟಪ ಮಕ್ಕಳಿಗೆ ಡಾ॥ ಚಂದ್ರಶೇಖರ ಕಂಬಾರರ 'ಅಲಿಬಾಬ ಮತ್ತು 40 ಕಳ್ಳರು' —ಎರಡು ನಾಟಕಗಳನ್ನು, ಜಂಬೆ ಅವರು Certified School ಮಕ್ಕಳಿಗೆ 'ಹೆಡ್ಡಾಯಣ' ಮತ್ತು ದಾವಣಗೆರೆಗೇ ಸೇರಿಕೊಂಡಂತಿರುವ ಶಾಮನೂರು ಹಳ್ಳಿಗರಿಗೆ 'ಚೋರ ಚರಣದಾಸ' ನಾಟಕಗಳನ್ನು ರಂಗಭೂಮಿಗೆ ಅಳವಡಿಸಲು ಸಿದ್ಧತೆ ನಡೆಸಿದ್ದಾರೆ. ಈ ಸಂದರ್ಭದಲ್ಲಿ ಕೆಲವು ದಿನ ಸಂಜೆ ತರಬೇತಿ ಕೇಂದ್ರಕ್ಕೆ ಭೇಟಿ ಕೊಟ್ಟು ಅಲ್ಲಿನ ತಯಾರಿ ಗಮನಿಸಿದೆ. ಆಗ 'ನೀನಾಸಂ'ನ ಈ ಮೂವರು ಮಿತ್ರರನ್ನು ಭೇಟಿ ಮಾಡಿ ಖಾಸಗಿಯಾಗಿ ಚರ್ಚಿಸಿದೆ.

ರಂಗಭೂಮಿ ಒಂದು ಭಾಷೆ. ಅದನ್ನು ಜನಕ್ಕೆ ತಲುಪಿಸುವುದು ನಮ್ಮ ಇಚ್ಛೆ. ಒಳ್ಳೆಯ ಸಾಂಸ್ಕೃತಿಕ ಆಹಾರ ಸಿಗಬೇಕಾದರೆ ನಾಟಕಗಳಂಥ ಪ್ರಭಾವ ಮಾಧ್ಯಮಗಳೇ ಅಗತ್ಯ. ಜನಸಾಮಾನ್ಯರಿಗೆ ಗಂಭೀರ ಕಲೆ ತಲುಪುವುದಿಲ್ಲ ಅನ್ನುವುದು ಸುಳ್ಳು; ಅದನ್ನು ತಲುಪಿಸುವ ಪ್ರಯತ್ನವನ್ನು ನಾವು ಮಾಡಬೇಕು. ಇಂಥ ಪ್ರಯತ್ನದಲ್ಲಿ ನಾವಂತೂ ಯಶಸ್ವಿಯಾಗಿದ್ದೇವೆ. ಹಳ್ಳಿಯ ಜನರೂ ಕೂಡ ಪ್ರಾರಂಭದಲ್ಲಿ ಹೊಸದನ್ನು ಸ್ವೀಕರಿಸಲು ಆಸಕ್ತಿ ತೋರಿಸದಿದ್ದರೂ; ಏನನ್ನೋ ಹೇಳುತ್ತಿದ್ದಾರೆ ಎಂಬ ಕುತೂಹಲದಿಂದ ವೀಕ್ಷಿಸಿ ಅವರೂ ಈಗ ಇಂಥ ನಾಟಕಗಳನ್ನು ನೋಡಲು ಹೆಚ್ಚು

ಆಸಕ್ತಿ ತೋರಿಸುತ್ತಿದ್ದಾರೆ. ಈ ಜನರ ಭಾವನೆಯನ್ನು ಕೆಟ್ಟ ಸಿನೆಮಾ, ನಾಟಕಗಳು ಕೆಡಿಸಿವೆ. ಇದನ್ನು ಕ್ರಮೇಣವಾದರೂ ಬದಲಾಯಿಸಿ ಅವರ ಆಸಕ್ತಿಯನ್ನು ಇಂಥ ವಿಚಾರಗಳಿಗೆ ಸ್ಪಂದಿಸುವಂತೆ ಮಾಡುವುದೂ ನಮ್ಮೆಲ್ಲರ ಕರ್ತವ್ಯ—ಈ ವಿಚಾರಗಳನ್ನೆಲ್ಲಾ 'ನೀನಾಸಂ' ಮಿತ್ರರೇ ಚರ್ಚೆಯಲ್ಲಿ ಹೇಳಿದರು 'ಬೆಂಗಳೂರಿನಲ್ಲಿ ಯಾವುದಾದರೂ ಪ್ರಯೋಗ ಕೊಡಲು ಬರುತ್ತೀರಾ?' ಎಂಬ ಪ್ರಶ್ನೆಗೆ ಬಂದ ಉತ್ತರ: 'ನಮಗಂತೂ ಬೆಂಗಳೂರಿಗೆ ಹೋಗೋ ಚಟ ಇಲ್ಲ!' —ಆರ್.ಜಿ.

● ●

## ಬಿಳಿ ನೆಲದ ಹಸಿರು ತೋಟದಲ್ಲಿ 'ಜನ' ಸಾಹಿತ್ಯ ಗೋಷ್ಠಿ!

ನಮ್ಮ ಸಾಹಿತಿ, ಕವಿ ಮಿತ್ರರಿಗೆ ವರುಷದ ಒಂದೊಂದು ತಿಂಗಳೂ ಒಂದು ರೀತಿ. ಸ್ಫೂರ್ತಿಯಿಂದ ಆಯಾ ಕಾಲವನ್ನು ತಮ್ಮದಾಗಿಸಿಕೊಂಡು ಕಾವ್ಯ-ಕತೆಗಳನ್ನು ಪುಟಗಟ್ಟಲೆ ತುಂಬಿ ಓದುಗನಿಗೆ ಕಚಗುಳಿ ಇಟ್ಟು ತಾವು ಖುಷಿಪಟ್ಟುಕೊಂಡವರುಂಟು. ಮಳೆಗಾಲದ ತಂಪು. ಬೇಸಗೆಯ ಬಿಸಿಲಿನ ತಾಪ, ವಸಂತಕಾಲದಲ್ಲಿ ಚಿಗುರೊಡೆದ ಗಿಡಮರಗಳ ಮೋಹಕತೆಯ ಚಿಗುರು ಕುರಿತು ಬರೆದವರೂ ಉಂಟಲ್ಲವೆ? ಈಗ ನಾನಿಲ್ಲಿ ಬರೀ ಡಿಶಂಬರ್ ಕುರಿತು ಮಾತಾಡುತ್ತಿರುವೆ :

ಡಿಶಂಬರ್–ಮೈ, ಕೈಗಳನ್ನೆಲ್ಲಾ ಕುಗ್ಗಿಸಿ, ಲವಲವಿಕೆಯನ್ನೆಲ್ಲಾ ಕಿತ್ತುಕೊಂಡ ಕಾಲ. ಲಂಕೇಶ್‌ರಂಥ ಸಂವೇದನಾಶೀಲ ಬರಹಗಾರನಿಗೆ 'ಕೌದಿ' ಒಳಗಿನ 'ಖುಷಿ' ಹಿತ. ಸಿಹಿ ಮಾತುಗಳು, ಬೆಚ್ಚಗಿನ ದೇಹಸುಖ ಇನ್ನೂ ಇಷ್ಟ. ನನ್ನಂಥ ಹುಡುಗು ಬುದ್ಧಿಯವನಿಗೂ ಏನೆಲ್ಲಾ ಬೆಚ್ಚಗಿನ ಕನಸುಗಳು; ಮನಸುಗಳು. ಕಾವ್ಯ ಕನ್ನಿಕೆಯರ ಬೆನ್ನತ್ತಿ ಅಪ್ಪಿ ಖುಷಿಪಡುವ (ನನ್ನನ್ನೂ ಸೇರಿಕೊಂಡು) ಎಷ್ಟೋ ಹದಿಹರೆಯದ ಹುಡುಗರಿಗೂ ಇದು ಸ್ವಲ್ಪವಾದರೂ ಸೋಮಾರಿತನ ಕೊಟ್ಟ ತಿಂಗಳಾಗಬಹುದಲ್ಲವೆ? ಏಕೆಂದರೆ ಮುಂಜಾನೆಯ ಚಳಿ ಅಷ್ಟೊಂದು ಕೊರೆಯುತ್ತಿದ್ದರೆ; ಸಂಜೆ ಮೈಕೈಗಳನ್ನೆಲ್ಲಾ 'ಬೆಚ್ಚಗಿನ' ಸ್ಥಳಕ್ಕೆ ಇಟ್ಟುಕೊಳ್ಳಲು ಒದ್ದಾಡುತ್ತದೆ, ಮನಸ್ಸು. ಬೆಳಗ್ಗೆ ಹಾಸಿಗೆಯಿಂದ ಏಳುವಾಗಲೇ ತಾತ್ಸಾರ, ನಿರುತ್ಸಾಹ. ಇಂಥ ಸಂದರ್ಭದಲ್ಲಿ ಬೆಂಗಳೂರಿನ ಸಮೀಪದ 'ವೈಟ್ ಫೀಲ್ಡ್'ನಲ್ಲಿ ಪ್ರಗತಿಪರ ವಿಚಾರಗಳಿಗೆ ಯಾವತ್ತೂ ಸ್ಪಂದಿಸುತ್ತಾ ಬಂದ ನಮ್ಮ ಬರಹಗಾರರ (ಮಿನಿ) ಗೋಷ್ಠಿಯೊಂದು ನಡೆಯಿತು. ಆ ಕುರಿತು ಹೇಳುವಾಗಿನ ಸಂದರ್ಭಕ್ಕೆ ಮೇಲಿನ ಮಾತುಗಳು ಪೀಠಿಕೆ.

ಶತ ಶತಮಾನಗಳ ಗುಲಾಮಗಿರಿ ಇಡೀ ಭಾರತಕ್ಕೆ, ಭಾರತೀಯರಿಗೆ ಹೊಸದಲ್ಲದಿದ್ದರೂ, ನೂರಾರು ವರ್ಷಗಳ ಕಾಲವಾದರೂ ವೈಟ್‌ಫೀಲ್ಡ್ (ಇಂಗ್ಲೆಂಡ್ ನೆನಪಿನ ಈ ನೆಲವನ್ನೆಲ್ಲಾ ಹೀಗೆ ಕರೆದು, 'ಬಿಳಿ' ಮನಸ್ಸನ್ನು ಶೋಷಕರನ್ನಾಗಿಸಿ 'ಕರಿ'ಯನ್ನು ಗುಲಾಮಗಿರಿಗೆ ಅರ್ಥೈಸಿಕೊಳ್ಳುವೆ; ಸಾಂಕೇತಿಸುವೆ. ಉದಾ: ಆಫ್ರಿಕನ್ ಕಪ್ಪು

ಜನರ ಸ್ಥಿತಿ ಈ ಸಂದರ್ಭದ ನೆನಪೂ ಕೂಡ) ನ ಕೆಂಪು ಮೂತಿಯವರು ನಮ್ಮನ್ನಂತೂ ಸುಲಿದಿದ್ದಾರೆ. ಶೋಷಿಸಿದ್ದಾರೆ. ಗುಲಾಮರನ್ನಾಗಿಸಿದ್ದಾರೆ. ನಮ್ಮ ರಾಜ್ಯದ ಇಂಥ ನೆಲದ ಕಸುವು ಹೇಗಿದೆಯೋ ನಾನಂತೂ ಅರಿಯೆ. ಆಗಾಗ್ಗೆ ಪತ್ರಿಕೆಗಳಲ್ಲಿ ಮಾತ್ರ ಸಾಯಿಬಾಬಾ ಎಂಬ ಅಷಾಢಭೂತಿಯು ಮನುಷ್ಯ ನಡೆಸುವ ಮುಗ್ಧ ಜನರ ಶೋಷಣೆ ಬಗ್ಗೆ ಓದಿದ್ದೇನೆ. ಅವನ ಗುಪ್ತ ಚಟುವಟಿಕೆಗಳ ನೆಲಮಾಳಿಗೆಯ ಬಗ್ಗೆಯೂ ಕೇಳಿದ್ದೆ. ಜನತೆಯ ಮೌಢ್ಯವೇ ಇವನ ಬಂಡವಾಳ ಎಂಬುದೂ ಗೊತ್ತಿತ್ತು. ಈ ರೀತಿಯ ವೈಟ್‌ಫೀಲ್ಡ್ ಕ್ರಿಶ್ಚಿಯನ್ ಸಂಸ್ಥೆಯೊಂದನ್ನು ಪಡೆದು ಪ್ರಬಲವಾಗಿದೆಯೆಂದೂ ಒಂದು ಸುದ್ದಿಯಿತ್ತು. ಡಿಸೆಂಬರ್ ೨ ರಂದು Ecumenical Christian Centre ಏರ್ಪಡಿಸಿದ್ದ ಗೋಷ್ಠಿಗೆ ಪತ್ರಕರ್ತರ ಪರವಾಗಿ ನಾನೊಬ್ಬ ಆಹ್ವಾನಿತ.

ವಿಷಯ : ಜನ–ಸಮಕಾಲೀನ ಸಾಹಿತ್ಯದಲ್ಲಿ ಬಿಂಬಿತವಾದಂತೆ. ಈ ಸಂಸ್ಥೆಯ ಪತಿಯಿಂದ ಸಂಯೋಜಕರಾಗಿದ್ದವರು ಸಂಕ್ರಮಣದ ಚಂದ್ರಶೇಖರ ಪಾಟೀಲರು ! ಇದೊಂದು ಮಹತ್ವಪೂರ್ಣವಾದ ವಿಚಾರ ಸಂಕಿರಣವೆಂದು ಈ ಮೊದಲೇ ಚಂಪಾರು ಆಜ್ಞೆ ಹೊರಡಿಸಿದ್ದರಿಂದ ಕುತೂಹಲದಿಂದ ವೀಕ್ಷಕನಾಗಿ ಹೊರಟೆ.

ಇ.ಸಿ.ಸಿ. ಎಂಬ ಈ ಸಂಸ್ಥೆ ವೈಟ್‌ಫೀಲ್ಡ್ ಬಸ್ ನಿಲ್ದಾಣದಿಂದ ಸುಮಾರು ಎರಡುಮೂರು ಕಿ.ಮೀ.ಗಳಾದರೂ ಇದ್ದಿರಬಹುದು. ಹೊಲಗಳನ್ನೆಲ್ಲಾ ಸೀಳಿ ಒಳಸುದಾರಿ ಮಾಡಿಕೊಂಡ ಈ ಸಂಸ್ಥೆ ಬಗ್ಗೆ ಏನೆಲ್ಲಾ ತಲೆ ಕೊರೆಯುತ್ತಿತ್ತು. ಒಬ್ಬನೇ ಬೆಳಗಿನ ಎಳೆ ಬಿಸಿಲಿನಲ್ಲಿ ದಾಪುಗಾಲು ಹಾಕುತ್ತ ಸ್ಥಳ ಮುಟ್ಟಿದೆ. ನಿಶ್ಯಬ್ದ ವಾತಾವರಣ. 'ಜನ'ವೇ ಇಲ್ಲ. ಸುಂದರ ಹಸಿರು ತೋಟ. ಅಲ್ಲಲ್ಲೇ ಕಟ್ಟಿದ್ದ ಕಲ್ಪನೆಗಿಂತಲೂ ಮಿಗಿಲಾದ ಬಂಗಲೆಗಳು. ಒಳ ಚಟುವಟಿಕೆಯ ಬಗ್ಗೆ ಮಾಹಿತಿ ಇರುವ ನಾಮಫಲಕ ತೋರಿಸಿದ ದಾರಿಯಲ್ಲಿ ನಡೆದೆ. ಯಾವುದೋ ಸ್ವಪ್ನ ಸುಂದರ ಲೋಕಕ್ಕೆ ಬಂದಂತಾಗಿತ್ತು. ಜನರೇ ಇಲ್ಲದ ಇಲ್ಲಿ 'ಜನ' ಸಾಹಿತ್ಯಗೋಷ್ಠಿ ಹೇಗಪ್ಪಾ ಎಂಬ ಅನುಮಾನ ಕಾಡತೊಡಗಿತು. ಹಾಗೇ ನಡೆಯುತ್ತಿದ್ದವನಿಗೆ ಹುಡುಗ–ಹುಡುಗಿರ ಹಾಸ್ಟೆಲ್ ಸಿಕ್ಕಿತು ! ಇದ್ದ (ಕಂಡ) ಒಬ್ಬನೇ ಒಬ್ಬನನ್ನು 'ಇಲ್ಲಿ ವಿಚಾರ ಸಂಕಿರಣ ನಡೆವ ಸ್ಥಳ ಯಾವುದು ?' ಅಂದೆ. ಆತ ಪ್ರಶ್ನಾರ್ಥಕವಾಗಿ ನನ್ನ ಮತ್ತೆ ನೋಡಿದ. ನನ್ನ ಭಾಷೆ ಅರ್ಥ ಆದಂತೆ ಕಾಣಲಿಲ್ಲ. ತಿಳಿಯಿತು–ಭಾಷೆ ಬದಲಾಯಿಸಿದೆ. ಇಂಗ್ಲಿಷ್‌ನಲ್ಲಿ ಹತ್ತಿರವಾದ.

ಆ ವ್ಯಕ್ತಿಯೊಂದಿಗೆ ಹೆಜ್ಜೆ ಹಾಕಿ ಗೋಷ್ಠಿಯ (ಗೌಪ್ಯ) ಕೋಣೆ ಸೇರಿದೆ. ಒಳಗೆ 'ಗೋಷ್ಠಿ' ಪ್ರಾರಂಭ ಆಗುತ್ತಿತ್ತು ! ಇಂಗ್ಲಿಷ್‌ನಲ್ಲಿ ಮಹಿಳೆಯೊಬ್ಬಳು ಇ.ಸಿ.ಸಿ. ಕಾರ್ಯ ಚಟುವಟಿಕೆಗಳ ಬಗ್ಗೆ ವಿವರಣೆ ಕೊಡುತ್ತಿದ್ದಳು. ನಂತರ ತಿಳಿಯಿತು; ಈಕೆಯೇ ಈ ಎಲ್ಲಾ ವ್ಯವಸ್ಥೆಯ ಸಹ ನಿರ್ದೇಶಕಿ ಕು॥ ಸೂಸಿ ನೆಲ್ಲಿಥಾನಮ್ ಎಂದು. ಕೋಣೆಯೊಳಗೆ ಕಾಲಿಡುತ್ತಿದ್ದಂತೆ ದಿಗಿಲಾಯಿತು : People as reflected in contemporary literature ನೆನಪಾಗಿ ಇಡೀ ಗೋಷ್ಠಿ ಇಂಗ್ಲಿಷ್‌ನಲ್ಲಾ

ದರೆ ಗಲಿಬಿಲಿಯಾಗಬಹುದೇನೋ ಎಂದು ಚಡಪಡಿಸಿದೆ. ಸದ್ಯ ಹಾಗಾಗಲಿಲ್ಲ.

ಹಿರಿಯ ಸಾಹಿತಿ ಚದುರಂಗ ಮೊದಲ ಗೋಷ್ಠಿಯ ಅಧ್ಯಕ್ಷರಾಗಿದ್ದರು. ಧಾರ್ಮಿಕ ಸಂಸ್ಥೆಯೊಂದು ಇಂಥ ಪ್ರಗತಿಪರ ವಿಚಾರಗಳ ನಂಬಿಕೆಯಿರುವ ಲೇಖಕರನ್ನೆಲ್ಲಾ ಒಂದೆಡೆ ಕೂಡಿಸಿ, ಯಾವುದಾದರೊಂದು ಸಂದರ್ಭಕ್ಕೆ ಬಳಸಿಕೊಳ್ಳಬಹುದೆ? ಎಂಬ ಅನುಮಾನವನ್ನು ಪ್ರಾಸ್ತಾವಿಕ ಭಾಷಣದಲ್ಲೇ ಹೇಳಿದರು.

ಗೋಷ್ಠಿಯ ವಿಷಯ ಚರ್ಚೆ ಆಗುವ ಮೊದಲು ವಿಚಾರವಾದಿ ಎ. ರಾಮಲಿಂಗಮ್ 'ಜನ ಯಾರು? ಎರಡು ಕಾಲಲ್ಲಿ ಓಡಾಡುವವರನ್ನು ಜನ ಅನ್ನಬೇಕೆ? ಅವರನ್ನು ಯಾವುದಕ್ಕೆ ಒಗ್ಗೂಡಿಸಬೇಕು?' ಎಂಬ ಪ್ರಶ್ನೆ ಎತ್ತಿ ಮೊದಲ ಗೋಷ್ಠಿಯ ಸಮಯವನ್ನೆಲ್ಲಾ ಇದರ ಅರ್ಥಕ್ಕೇ ಸೀಮಿತಗೊಳಿಸಿದರು. 'ಸಾಂಘಿಕ ಜೀವನ ನಡೆಸುವಂತಹ ಜನ ಸಮುದಾಯವನ್ನು ಜನ ಎಂದು ಕರೆಯಬಹುದು; ಈ ಜನ ಅಭಿವ್ಯಕ್ತಿಯಾಗಿದ್ದರೆ ಅದು ಜಾನಪದದಲ್ಲಿ ಮಾತ್ರ' ಎಂದು ಪ್ರೊ|| ಜಿ ಎಸ್. ಶಿವರುದ್ರಪ್ಪ ಅಭಿಪ್ರಾಯಪಟ್ಟರೆ, 'ಜನ ಅಂದ್ರೆ ಜಾತಿ', 'ಇವನು ನಮ್ಮ ಜನ' ಅನ್ನೋದೇ ಸಂಕುಚಿತ ಮನೋಭಾವದ ಮತ್ತು ಸೀಮಿತ ಅರ್ಥದ ಕಲ್ಪನೆ. 'ಸಮಾಜ ಅನ್ನೋದೇ ಜನ ಸಮುದಾಯದ ಪದ' ಎಂಬುದು ಪ್ರೊ|| ಬಿ. ವಿ. ವೀರಭದ್ರಪ್ಪ ಮತ್ತು ಡಾ|| ಪೋಲಂಕಿ ರಾಮಮೂರ್ತಿ ಅವರ ಅಭಿಪ್ರಾಯ ಕೂಡ.

'Individual Identity ಯಾರಿಗೆ ಇರುವುದಿಲ್ಲವೋ ಅಂಥ ಅನಾಮಧೇಯರ ಸಮೂಹವೇ ಜನ'ವೆಂದು ಬರಗೂರು ರಾಮಚಂದ್ರಪ್ಪ ಹೇಳಿದರೆ, 'ಸಾಮಾನ್ಯ ಜನ' ಎಂಬ ಮಾತನ್ನು ಆಗಾಗ್ಗೆ ಬಳಸ್ತಾನೇ ಇರ್‍ತೀವಿ, ಹಾಗಿದ್ರೆ ಸಾಮಾನ್ಯನಲ್ಲದ ಜನ ಯಾರು? ರೈತನನ್ನು 'ನೇಗಿಲಯೋಗಿ' ಎಂದು ವೈಭವೀಕರಿಸಿ ಮೋಸ ಮಾಡಲಾಗಿದೆ ಎಂಬುದು ಚಂದ್ರಶೇಖರ ಪಾಟೀಲರ ಆಪಾದನೆ. ಕವಿ ಸಿದ್ಧಲಿಂಗಯ್ಯ ಅವರು ಜನಕ್ಕಿಂತ ಜನಪ್ರಜ್ಞೆ ಮುಖ್ಯ. ಈ ಸಾಮಾನ್ಯ ಜನ ಎಂದು ಕರೆದದ್ದು ಕೆಳಸ್ತರದವರನ್ನು ಎಂದು ಅಭಿಪ್ರಾಯಿಸಿದರು. 'ಶ್ರೇಣೀಕೃತ ಸಮಾಜದ ಪ್ರತಿಯೊಬ್ಬನೂ ಜನಾನೇ' ಎಂದು ಚದುರಂಗ ಹೇಳಿದರು.

ಹಳೆಗನ್ನಡ ಸಾಹಿತ್ಯದಲ್ಲಿ ಜನಸಾಮಾನ್ಯರನ್ನು ಕಡೆಗಣಿಸಲಾಗಿದೆ. ರಾಜ ಮಹಾರಾಜರನ್ನೇ ಓಲೈಸಿಕೊಂಡು ಬದುಕಿದ ಕವಿಗಳು ಅವರಿಗೇ ಕಾವ್ಯ ರಚಿಸಿದರು. ಆಶ್ರಯ ಕೊಟ್ಟ ರಾಜರ ಬದುಕನ್ನೇ ವೈಭವೀಕರಿಸಿ ಹೇಳುತ್ತಾ ಜನಸಾಮಾನ್ಯರಿಂದ ದೂರಾದ ಸಾಹಿತ್ಯ ನಿರ್ಮಾಣ ಮಾಡಿದರು. 12ನೇ ಶತಮಾನದಲ್ಲಿ ಜನಸಾಮಾನ್ಯರಿಗೆ ತಲುಪುವ ಸಾಹಿತ್ಯ ನಿರ್ಮಾಣವಾದರೂ, ಆ ಸಂದರ್ಭದ ವಚನಕಾರರು ರಾಜರನ್ನು ಬಿಟ್ಟರೂ 'ಧರ್ಮ'ವನ್ನು ಬಿಡಲಿಲ್ಲ ಎಂಬ ವಿಚಾರವನ್ನು ಹಲವರು ಚರ್ಚೆಯಲ್ಲಿ ಮಂಡಿಸಿದರು.

ಜನಪದ ಸಾಹಿತ್ಯ ಮತ್ತು ವಚನ ಸಾಹಿತ್ಯವಷ್ಟೇ ಜನಸಾಮಾನ್ಯರ ಹತ್ತಿರ ಬಂದದ್ದು ಎಂಬುದನ್ನು ಬಹುತೇಕ ಬರಹಗಾರರು ಒಪ್ಪಿಕೊಂಡರು.

ಮಹಿಳಾ ಲೇಖಕಿಯರಲ್ಲಿ ಬಾನುಮುಷ್ತಾಕ್, ಸಾರಾ ಅಬೂಬಕ್ಕರ್ ಗೋಷ್ಠಿಯಲ್ಲಿ ಭಾಗವಹಿಸಿದ್ದರು. ತರಾಸು ಅವರ 'ಮೊದಲ ನೋಟ' ಕಾದಂಬರಿಯಲ್ಲಿ ಮುಸ್ಲಿಂ ತರುಣನ ತ್ಯಾಗಮಯ ಜೀವನ ಚಿತ್ರಿತವಾಗಿದ್ದರೆ; ಜಯತೀರ್ಥ ರಾಜಪುರೋಹಿತರ 'ಸುಳಿಗಾಳಿ'ಯಲ್ಲಿ ಎಲ್ಲ ಕೆಟ್ಟಗುಣಗಳ ಸಾಕಾರ ಚಿತ್ರಣ ಮುಸ್ಲಿಂ ಸಮುದಾಯದಲ್ಲಿ ಕಂಡುಬರುತ್ತದೆ; ಒಂದು ಜಾತಿಯವರನ್ನು ಸಾಹಿತ್ಯದಲ್ಲಿ ಕೆಟ್ಟದಾಗಿ ತೋರಿಸಲಾಗಿದೆ. ಇದು ಆರೋಗ್ಯಕರ ಲಕ್ಷಣವಲ್ಲವೆಂದು ಬಾನು ನೊಂದು ನುಡಿದರು.

ಸಾರಾ ಅಬೂಬಕ್ಕರ್ ಅವರು ವೈಭವೀಕರಿಸಿ ಬರೆವ ಮಹಿಳಾ ಲೇಖಕರನ್ನು ತರಾಟೆಗೆ ತೆಗೆದುಕೊಂಡರು. 'ಬಣ್ಣದ ಗೊಂಬೆಗಳ ಹೃದಯದಲ್ಲಿನ ನೋವನ್ನು ಚಿತ್ರಿಸುವಲ್ಲಿ ಇವರುಗಳು ಸೋತಿದ್ದಾರೆ' ಎಂದು ಅಭಿಪ್ರಾಯಪಟ್ಟರು.

ಚರ್ಚೆಯಲ್ಲಿ ಇವರುಗಳೇ ಅಲ್ಲದೆ; ಕಾಳೇಗೌಡ ನಾಗವಾರ. ಶಿವರಾಮು ಕಾಡನಕುಪ್ಪೆ, ಎಸ್. ಜಿ. ಸಿದ್ಧರಾಮಯ್ಯ, ಗಿರಡ್ಡಿ ಗೋವಿಂದರಾಜ, ಹಿ. ಶಿ. ರಾಮಚಂದ್ರೇಗೌಡ, ಮ. ನ. ಜವರಯ್ಯ, ನಾಗರಾಜಪ್ಪ, ಗಂಗಾಧರಮೂರ್ತಿ ಅವರುಗಳೂ ಭಾಗವಹಿಸಿದ್ದರು.

ಬೆಳಗ್ಗೆಯಿಂದ ಸಂಜೆವರೆಗೆ ನಡೆದ ಇಂಥದೊಂದು ಗೋಷ್ಠಿ ಸಾಹಿತ್ಯ ಪರಂಪರೆಯನ್ನು ಕುತೂಹಲದಿಂದ ವೀಕ್ಷಿಸುವ ನನ್ನಂಥವನಿಗೆ ಹಲವು ರೀತಿಯಿಂದ ಉಪಯುಕ್ತ ಅನ್ನಿಸಿತು. ಪಂಪ-ರನ್ನರಿಂದ ಹಿಡಿದು ಪ್ರಸ್ತುತ ಸಾಹಿತ್ಯದವರೆಗಿನ ಎಲ್ಲಾ ಮುಖಗಳ ಚರ್ಚೆಯು ಪೂರ್ಣವಲ್ಲದಿದ್ದರೂ ಕೆಲವು ಅಭಿಪ್ರಾಯಗಳ ನಡುವೆಯೂ ಮುಕ್ತಾಯವಾದದ್ದು; ಸಾಹಿತ್ಯ ಚರ್ಚೆ ಅಂತ್ಯ ಹೇಗೆ—ಒಂದು Consclusion ಬರಲು ಸಾಧ್ಯವಿಲ್ಲ ಎಂಬುದನ್ನು ಹೇಳುತ್ತಾ ಮುಕ್ತಾಯಿಸುವೆ.

—ಆರ್. ಜಿ. ಹಳ್ಳಿ ನಾಗರಾಜ್

---

## ಸಾಹಿತಿ-ಸಾಹಿತ್ಯ : ಸುದ್ದಿ

○ 'ಬಯಕೆ ಬಿಸಿಲಿಗೆ ಬಿರುಕು ಬಿರುಕಾದ ಎದೆಯ ನೆಲೆಗಳ ಮೇಲೆ ಮಳೆಯ ತರಬೇಕು'-ಎಂಬ ಕಾವ್ಯಮಯ ಸಾಲುಗಳನ್ನು ನಮ್ಮ ಮುಂದಿಡುತ್ತ; ಕಾವ್ಯದ ಕಸುವಿನ ಶಕ್ತಿ ತೋರಿಸಿದ ಕವಿ ಎಚ್. ಎಸ್. ಶಿವಪ್ರಕಾಶ್ ಈಗ ನಾಟಕಕಾರರೂ ಆಗಿದ್ದಾರೆ. ಇವರ ಕಾವ್ಯವನ್ನು ರಂಗಭೂಮಿ ಪ್ರಯೋಗಕ್ಕೆ ಅಳವಡಿಸಿದ ನಂತರ. ಇನ್ನೂ ಹೆಚ್ಚು ಕಾವ್ಯಪ್ರೇಮಿಗಳ, ನಾಟಕಾಭಿಮಾನಿಗಳ ಮನದಲ್ಲಿ ನೆಲೆ ನಿಂತು ಕುತೂಹಲ ಹುಟ್ಟಿಸಿದ್ದಾರೆ. ಹನ್ನೆರಡನೇ ಶತಮಾನದ ಬಿಜ್ಜಳ ರಾಜನ ಕೊಲೆಯ ಸಂಚಿನ ಹಿನ್ನೆಲೆಯಲ್ಲಿ ರಚಿತವಾದ 'ಮಹಾಚೈತ್ರ' ಎಂಬ ಈ ನಾಟಕದ ನಿರ್ದೇಶನವನ್ನು ದ್ಯಾವನೂರರ 'ಒಡಲಾಳ' ಖ್ಯಾತಿಯ ಸಿ. ಜಿ. ಕೃಷ್ಣಸ್ವಾಮಿ ರಂಗದ ಮೇಲೆ ತರಲಿದ್ದಾರಂತೆ.

○ ಸಾಹಿತ್ಯದ ಮೂಲಕ ಜಾತಿ ನಿರ್ಮೂಲನೆ/ಪೋಷಣೆ (ಎರಡೂ) ಮಾಡಹೊರಟ ಇಬ್ಬಂದಿತನದ ಸಾಹಿತ್ಯ ಸೃಷ್ಟಿಕರ್ತರನ್ನು ಈ ದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲೇ ಕಾಣಬಹುದು. ಮೇಲ್ವರ್ಗದ ಜಾತಿಯ ಹೆಣ್ಣನ್ನು ಕೆಳವರ್ಗದ ಗಂಡು ದಕ್ಕಿಸಿ ಕೊಳ್ಳುವುದು (ತನ್ನವಳನ್ನಾಗಿಸಿಕೊಳ್ಳುವುದು); ಕೆಳವರ್ಗದ ಹೆಣ್ಣನ್ನು ಮೇಲ್ವರ್ಗದ ಗಂಡು ಭೋಗಿಸುವುದು–ನಮ್ಮ ಕನ್ನಡದ ಸಂದರ್ಭದಲ್ಲಿ ಹೇಳುವುದಾದರೆ ಹೊಸ ವಿಚಾರಗಳೇನೂ ಅಲ್ಲ. ಈ ಮಾತುಗಳನ್ನು ಹೇಳುವಾಗ ನಮ್ಮ ಖ್ಯಾತ ಬುದ್ಧಿಜೀವಿ ಸಾಹಿತಿಗಳು ನಮ್ಮ ಕಣ್ಣ ಮುಂದೆ ಸುಳಿಯಬಹುದು. ಈ ಸಾರಿಯ ನನ್ನ ಅಂಕಣಕ್ಕೆ ಸಿಕ್ಕಿ ಬಿದ್ದವರು ಮೈಸೂರಿನ ಖ್ಯಾತ ಕಾದಂಬರಿ ಸಾರ್ವಭೌಮ (?) 'ಪರ್ವ'ದ ಎಸ್. ಎಲ್. ಭೈರಪ್ಪನವರು !

ಮೈಸೂರಿನ ನೆಲ ಹೆಸರಾಂತ ಕವಿ, ಸಾಹಿತಿ, ವಿಮರ್ಶಕರನ್ನು ಕನ್ನಡ ಸಾಹಿತ್ಯಕ್ಕೆ ನೀಡಿ ಸಾಹಿತ್ಯ ಪ್ರಪಂಚವನ್ನು ಶ್ರೀಮಂತಗೊಳಿಸಿದೆ. ರಾಷ್ಟ್ರಕವಿ ಕುವೆಂಪು ಅವರ ವಾಸಸ್ಥಳವೂ ಇದಾಗಿದ್ದು; ಮೈಸೂರಿನ ನಗರಪಾಲಿಕೆ ತೊಣಚಿಕೊಪ್ಪಲು ಎಂಬ ಬಡಾವಣೆಯನ್ನು 'ಕುವೆಂಪು ಬಡಾವಣೆ'ಯೆಂದು ನಾಮಕರಣ ಮಾಡಿತು. ಇದು ಶೂದ್ರ ಕವಿಯ ಹೆಸರಾದ್ದರಿಂದ; ಇವರನ್ನು ಅಷ್ಟಾಗಿ ಪ್ರೀತಿಸದ ಬ್ರಾಹ್ಮಣ ಸಾಹಿತಿ ವರ್ಗ ಒಳಗೊಳಗೇ ಈ ಬಡಾವಣೆಯ ಹೆಸರನ್ನು ವಿರೋಧಿಸಿ. ಬದಲಾಯಿಸಲು ಯತ್ನಿಸಿತು. ಇಂಥ ಒಂದು ಗುಂಪು ಭೈರಪ್ಪನವರದೂ ಆದ್ದರಿಂದ ಕುವೆಂಪು ಬಡಾವಣೆ ಬೇಡವೆಂದು ಸಹಿ ಸಂಗ್ರಹದ ಕೆಲಸಕ್ಕೂ ಸಿದ್ಧವಾಯಿತು. ಮುಂದೆ ಈ ಕಾರ್ಯ ಯಶಸ್ವಿಯಾಗದೇ ಹೋದ್ದರಿಂದ ಮುಖ ಸುಟ್ಟ 'ಕಮಲ'ಗಳಾಗಿ. ತಮ್ಮದೇ ಗೆಲುವೆಂಬುದನ್ನು ತೋರಿಸಿಕೊಳ್ಳಲು ಪ್ರಯತ್ನಿಸಿದರು. ಇಂದೂ ಕೂಡ ಅಪ್ಪಿ ತಪ್ಪಿಯೂ ಈ ಕಾದಂಬರಿಕಾರರು ತಮ್ಮ ವಿಳಾಸದಲ್ಲಿ 'ಕುವೆಂಪು ಬಡಾವಣೆ'ಯೆಂದು ಎಲ್ಲೂ ಬರೆದುಕೊಳ್ಳುತ್ತಿಲ್ಲ. ಇತ್ತೀಚಿನ 'ತರಂಗ' ವಾರಪತ್ರಿಕೆಯಲ್ಲಿ ಅವರ ವಿಳಾಸ ಅಚ್ಚಾಗಿದ್ದು, ಅದರಲ್ಲಿ 'ತೊಣಚಿಕೊಪ್ಪಲು ಬಡಾವಣೆ' ಎಂದೇ ಇದೆ! (ಖಾತ್ರಿಗಾಗಿ: 'ತರಂಗ'ಗಳನ್ನು ಗಮನಿಸಿ)

ನಿಮಗೊಂದು ಆಹ್ವಾನ: ಭೈರಪ್ಪನವರ ಮನೆ ಗೇಟಿಗೆ ಹೋಗಿ ಬನ್ನಿ. ನಯವಾದ ಕಲ್ಲಿನ ಮೇಲೆ 'ಎಸ್. ಎಲ್. ಭೈರಪ್ಪ, ತೊಣಚಿಕೊಪ್ಪಲು ಬಡಾವಣೆ' ಎಂಬ ಹೆಸರನ್ನು ಕೆತ್ತಿಸಿ ಭದ್ರಪಡಿಸಿದ್ದಾರೆ.

ಕಲ್ಲಲ್ಲಿ ಕಟೆದ ಹೆಸರು ಮತ್ತು ಸಿಮೆಂಟಿನ ಈ ಭದ್ರತೆ ತಮ್ಮೊಳಗೆ ಕೆಲಸ ಮಾಡುತ್ತಿರುವ ಜಾತಿಯ ಭದ್ರತೆಯ ಸಂಕೇತ ಕೂಡ.

ನೋಡಿದಿರಾ, ನಮ್ಮ (ಬ್ರಾಹ್ಮಣ) ಕಾದಂಬರಿಕಾರರು ರಾಷ್ಟ್ರಕವಿ (ಶೂದ್ರ)ಗೆ ಕೊಟ್ಟ ಗೌರವವನ್ನು.

— ಅರುಂಧತೇಜ

## ಈ ಸಂಚಿಕೆಯ ಲೇಖಕರು

O **ಪ್ರಹ್ಲಾದ ಚಟಗೇರಿ,** 41/1, ಗೋವಿಂದಪ್ಪ ರಸ್ತೆ, ಬಸವನಗುಡಿ, ಬೆಂಗಳೂರು 560004. O **ಕೆ. ಪಿ. ಪೂರ್ಣಚಂದ್ರ ತೇಜಸ್ವಿ,** ಹ್ಯಾಂಡ್ ಪೋಸ್ಟ್, ಮೂಡಿಗೆರೆ–577132, ಚಿಕ್ಕಮಗಳೂರು ಜಿಲ್ಲೆ. O **ಡಾ|| ಬಸವರಾಜ ಸಬರದ,** ಕನ್ನಡ ವಿಭಾಗ, ಕರ್ನಾಟಕ ಕಾಮರ್ಸ್ ಕಾಲೇಜು, ಬೀದರ–585401. O **ರಾ. ಮೂರ್ತಿ,** ಸಹ ಸಂಪಾದಕ, 'ಅನ್ವೇಷಣೆ'. O **ಬಿ. ಟಿ. ಲಲಿತಾ ನಾಯಕ,** 'ಕ್ರಾಂತಿಪಥ', 230, ನಿಜಲಿಂಗಪ್ಪ ಕಾಲೋನಿ, ರಾಯಚೂರು–584101. O **ಕೆ. ಎನ್. ನಾಗರಾಜ್,** ಕಣಜನಹಳ್ಳಿ ಅಂಚೆ, ಹಿರಿಯೂರು ತಾ|| 577546. O **ವೀಚಿ (ವೀ. ಚಿಕ್ಕವೀರಯ್ಯ),** ಚಿಕ್ಕವೀರನಪಾಳ್ಯ, 572101, ತುಮಕೂರು ಜಿಲ್ಲೆ. **ಡಿ. ಹೊಸಳ್ಳಿ ಶಿವು,** ರೂಂ ನಂ. 1, ಬಾದಾಮಿ ಬಿಲ್ಡಿಂಗ್ಸ್, ಜಯಲಕ್ಷ್ಮಿಪುರ, ಮೈಸೂರು–570012. O **ನಾವ ರಸನ್,** ಕ್ರಿಯಾ ಪ್ರಕಾಶನ, 5ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು–9. O **ಡಾ|| ಪೋಲಂಕಿ ರಾಮಮೂರ್ತಿ,** ರೀಡರ್, ಇಂಗ್ಲಿಷ್ ವಿಭಾಗ, ಮಾನಸ ಗಂಗೋತ್ರಿ, ಮೈಸೂರು–570006. O **ಅರುಂಧತೇಜ,** ಕೇರಾಫ್ 'ಅನ್ವೇಷಣೆ'.

ಸಾಹಿತ್ಯ ಪತ್ರಿಕೆ ತರುವ ನಮ್ಮ ಸಾಹಸದ ಬಗ್ಗೆ ಬೆನ್ನು ತಟ್ಟಿ, ಮೆಚ್ಚಿದ ಮಿತ್ರರೆ, ಪತ್ರಿಕೆ ಕಾಲಕಾಲಕ್ಕೆ ನಿಮ್ಮ ಕೈ ಸೇರಲು ನಮ್ಮ ಕೈಗಳನ್ನು ಬಲಪಡಿಸಿ—ವಾರ್ಷಿಕ ಚಂದಾ ಹಣ ಕೇವಲ ರೂ. 20 ಕಳುಹಿಸಿ. ಇಲ್ಲವೇ ಪೋಷಕ ನಿಧಿ ಇಡಿ. ನಾವಂತೂ ಪ್ರಾಮಾಣಿಕವಾಗಿ ನಿಮ್ಮ ಸೇವೆಗೆ ಸಿದ್ಧ.

## ಅಭಿನಂದನೆ

ಬಂಡಾಯ ಸಾಹಿತಿ, ವಿಮರ್ಶಕ ಬರಗೂರು ರಾಮಚಂದ್ರಪ್ಪ ಅವರು ನಿರ್ದೇಶಿಸಿದ 'ಬೆಂಕಿ' ಚಲನಚಿತ್ರಕ್ಕೆ ದ್ವಿತೀಯ ಬಹುಮಾನವೆಂದು ರಾಜ್ಯ ಪ್ರಶಸ್ತಿ ಬಂದದ್ದು ನಮಗೆ ಸಂತೋಷವನ್ನುಂಟುಮಾಡಿದೆ. ಹಾಗೆಯೇ ದಲಿತ ಕವಿ ಸಿದ್ಧಲಿಂಗಯ್ಯ ಅವರು ಬರೆದ 'ಧರಣಿ ಮಂಡಲ ಮಧ್ಯದೊಳಗೆ' ಚಿತ್ರದ 'ಕಾಸನು ಬೀಸಿ......' ಹಾಡಿಗೂ ಪ್ರಶಸ್ತಿ ಬಂದಿದೆ. ಇಬ್ಬರನ್ನೂ 'ಅನ್ವೇಷಣೆ' ಅಭಿನಂದಿಸುತ್ತದೆ.

—ಸಂಪಾದಕ

ANVESHANE Kannada Monthly — December 1984
MAG(5) PRB-DECL-73/84-85

## ಮುಂದಿನ ಸಂಚಿಕೆಯಲ್ಲಿ....

ಡಾ॥ ಆರ್ಕೆ ಮಣಿಪಾಲ–ಕುಂ. ವೀರಭದ್ರಪ್ಪ–ಚಂದ್ರಶೇಖರ ತಾಳ್ಯ–ಶಂಕರ ಕಟಗಿ–ಪ್ರೊ॥ ಸಂಜೀವ ದೇಶಪಾಂಡೆ–ಬಿ. ಎಸ್. ಗಾಯತ್ರಿ–ಎಸ್. ಎಸ್. ಇಂದುವದನೆ–ದೊಡ್ಡಹುಲ್ಲೂರು ರುಕ್ಕೋಜಿ–ಎಸ್.ಬಿ ಉದಯಕುಮಾರ್–ಮೋಹನ್ ಜಿ.ಎನ್. –ಸ. ರಘುನಾಥ–ನಟೇಶ ದೊಡ್ಡಟ್ಟಿ–ಎಲ್. ಹನುಮಂತಯ್ಯ–ಎಸ್. ಎಸ್. ರೇಣುಕಾರಾಧ್ಯ— ಇವರ ಬರಹಗಳು.



Edited, Printed & Published by R. G. Halli Nagaraj.
Printed at Chetana Printers, L. N. Puram, Bangalore-560 021